CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೫೪ | ಬೆಂಗಳೂರು, ಗುರುವಾರ, ಫೆಬ್ರವರಿ ೧೯, ೨೦೦೪ (ಮಾಘ ೩೦ ಶಕ ವರ್ಷ ೧೯೨೫) | ಸಂಚಿಕೆ ೦೮

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ತಹಸೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಉಪನಗರ**

**ನಮೂನೆ-27**

**ಭೂ ಕಂದಾಯ ಅಧಿನಿಯಮ 68(1)ನೇ ಪ್ರಕರಣದ ಮೇರೆಗೆ ಘೋಷಣೆ**

**ಸಂ:ಎಲ್‌ಎನ್‌ಡಿ:ಸಿಆರ್:131:03-04**

ಈ ಕೆಳಗಿನ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿದ ನಂಬರ್ ಕಾಣದ ಹದ್ದುಗಿಡದ ಹಳ್ಳದಲ್ಲಿನ ಸುಮಾರು 2-00 ಎಕರೆ ಜಮೀನು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲ ಎಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ,

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ನಂಬರ್ ಕಾಣದ ಹದ್ದುಗಿಡದ ಹಳ್ಳದ ಭಾಗದ ಜಮೀನನ್ನು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಹದ್ದುಗಿಡದ ಹಳ್ಳದ ಜಾಗದಲ್ಲಿ ಅಥವಾ ಅದರ ಮೇಲಿನ ಸಾರ್ವಜನಿಕ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳುತ್ತವೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

ಈ ರೀತಿ ಸರ್ಕಾರಿ ನಂಬರ್ ಕಾಣದ ಹದ್ದುಗಿಡದ ಹಳ್ಳದ ಭಾಗದ ಜಮೀನನ್ನು ಸಾರ್ವಜನಿಕ ಉದ್ದೇಶದಿಂದ ಖಾಯಂ ಆಗಿ ಮುಚ್ಚಲು ಉದ್ದೇಶಿಸಿದೆ. ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೆ ಒಳಗಾಗುವ ಯಾವುದೇ ಸಂಘ ಸಂಸ್ಥೆ ಈ ಅಧಿಸೂಚನೆಯನ್ನು ಹೊರಡಿಸಿದ 90 ದಿನಗಳ ಒಳಗಾಗಿ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮದ ರೀತಿಯನ್ನು ವಿವರದೊಂದಿಗೆ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಬರಹದಲ್ಲಿ ತಿಳಿಸತಕ್ಕದ್ದು.

**ಅನುಸೂಚಿ**

ಜಿಲ್ಲೆ:ಬೆಂಗಳೂರು

ತಾಲ್ಲೂಕು: ಬೆಂಗಳೂರು ಉತ್ತರ (ಅಪರ) ತಾ:

ಹೋಬಳಿ: ಯಲಹಂಕ

ಸರ್ವೆ ನಂ: ಕೋತಿಹೊಸಹಳ್ಳಿ ಗ್ರಾಮದ
ನಂ. ಕಾಣದ ಹದ್ದುಗಿಡದಹಳ್ಳ

**ನಂಬರ್ ಕಾಣದ ಹದ್ದುಗಿಡದ ಹಳ್ಳದ ಚೆಕ್ಕುಬಂದಿ**

ಪೂರ್ವ :
ಪಶ್ಚಿಮ :
ಉತ್ತರ :
ದಕ್ಷಿಣ :

**ವಿ. ನಾರಾಯಣಸ್ವಾಮಿ**
ತಹಸೀಲ್ದಾರ್
ಬೆಂಗಳೂರು ಉತ್ತರ ತಾಲ್ಲೂಕು (ಅಪರ) ಬೆಂಗಳೂರು

ಪಿ.ಆರ್. 119

**ತಹಸೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಉತ್ತರ ತಾಲ್ಲೂಕು (ಅಪರ), ಯಲಹಂಕ**

**ನಮೂನೆ-27**

**ಭೂ ಕಂದಾಯ ಅಧಿನಿಯಮ 68(1)ನೇ ಪ್ರಕರಣದ ಮೇರೆಗೆ ಘೋಷಣೆ**

**ಸಂ:ಎಲ್‌ಎನ್‌ಡಿ:ಸಿಆರ್:174:2002-03**

ಈ ಕೆಳಗಿನ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿದ ಸರ್ಕಾರಿ ಖರಾಬು ಕಟ್ಟೆಯು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲ ಎಂದು ರಾಜ್ಯ ಸರ್ಕಾರಕ್ಕೆ ಕಂಡುಬಂದಿರುವುದರಿಂದ,

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸರ್ಕಾರಿ ಖರಾಬು ಕಟ್ಟೆಯ ಭಾಗವನ್ನು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಕಟ್ಟೆಯ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳುತ್ತವೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

ಈ ರೀತಿ ಸದರಿ ಖರಾಬು ಕಟ್ಟೆ ಭಾಗವನ್ನು ಸಾರ್ವಜನಿಕ ಉದ್ದೇಶದಿಂದ ಖಾಯಂ ಆಗಿ ಮುಚ್ಚಲು ಉದ್ದೇಶಿಸಿದೆ. ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೆ ಒಳಗಾಗುವ ಯಾವುದೇ ವ್ಯಕ್ತಿ ಸಂಘ ಸಂಸ್ಥೆ ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು ದಿನಗಳ ಒಳಗಾಗಿ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮದ ರೀತಿಯನ್ನು ಹಾಗೂ ಅದರ ಪರಿಹಾರ ಕೋರುವ ಮೊಬಲಗು ವಿವರಗಳನ್ನು ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಬರಹದಲ್ಲಿ ತಿಳಿಸತಕ್ಕದ್ದು.

**ಅನುಸೂಚಿ**

ಜಿಲ್ಲೆ:ಬೆಂಗಳೂರು ತಾಲ್ಲೂಕು: ಬೆಂಗಳೂರು ಉತ್ತರ (ಅಪರ) ತಾ:

ಹೋಬಳಿ: ಯಲಹಂಕ ಸರ್ವೆ ನಂ: 28, 2-01 ಗುಂಟೆ ಖರಾಬು ಕಟ್ಟೆ ಜಮೀನು, ರಾಮಚಂದ್ರಪುರ ಗ್ರಾಮ

**ಈ ಸರ್ಕಾರಿ ಖರಾಬು ಕಟ್ಟೆಯ ಚಕ್ಕುಬಂದಿ**

ಪೂರ್ವ :
ಪಶ್ಚಿಮ :
ಉತ್ತರ :
ದಕ್ಷಿಣ :

**ವಿ. ನಾರಾಯಣಸ್ವಾಮಿ**
ತಹಸೀಲ್ದಾರ್
ಬೆಂಗಳೂರು ಉತ್ತರ ತಾಲ್ಲೂಕು (ಅಪರ) ಬೆಂಗಳೂರು

ಪಿ.ಆರ್. 120

**ತಹಸೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಉತ್ತರ ತಾಲ್ಲೂಕು (ಅಪರ), ಯಲಹಂಕ ಉಪನಗರ**

**ನಮೂನೆ-27**

**ಭೂ ಕಂದಾಯ ಅಧಿನಿಯಮ 68(1)ನೇ ಪ್ರಕರಣದ ಮೇರೆಗೆ ಘೋಷಣೆ**

**ಸಂ:ಎಲ್‌ಎನ್‌ಡಿ:ಸಿಆರ್:308:2000-01**

ಈ ಕೆಳಗಿನ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿದ ಸರ್ಕಾರಿ ಕೆರೆಯ ದಾರಿಯು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲ ಎಂದು ರಾಜ್ಯ ಸರ್ಕಾರಕ್ಕೆ ಕಂಡುಬಂದಿರುವುದರಿಂದ, ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸರ್ಕಾರಿ ಕೆರೆಯ ದಾರಿಯ ಭಾಗವನ್ನು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸರ್ಕಾರಿ ಕೆರೆಯ ದಾರಿಯ ವಿಚಾರದಲ್ಲಿ ಅದರ ಮೇಲೆ ಸಾರ್ವಜನಿಕ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳುತ್ತವೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

ಈ ರೀತಿ ಸದರಿ ಸರ್ಕಾರಿ ಕೆರೆಯ ದಾರಿಯ ಭಾಗವನ್ನು ಸಾರ್ವಜನಿಕ ಉದ್ದೇಶದಿಂದ ಖಾಯಂ ಆಗಿ ಮುಚ್ಚಲು ಉದ್ದೇಶಿಸಿದೆ. ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೆ ಒಳಗಾಗುವ ಯಾವುದೇ ವ್ಯಕ್ತಿ ಸಂಘ ಸಂಸ್ಥೆ ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು ದಿನಗಳ ಒಳಗಾಗಿ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮದ ರೀತಿಯನ್ನು ವಿವರಗಳೊಂದಿಗೆ ಜಿಲ್ಲೆಯ ಜಿಲ್ಲಾಧಿಕಾರಿ ಬರಹದಲ್ಲಿ ತಿಳಿಸತಕ್ಕದ್ದು.

**ಅನುಸೂಚಿ**

ಜಿಲ್ಲೆ:ಬೆಂಗಳೂರು ತಾಲ್ಲೂಕು: ಬೆಂಗಳೂರು ಉತ್ತರ (ಅಪರ) ತಾ:

ಹೋಬಳಿ: ಯಲಹಂಕ ಸರ್ವೆ ನಂ: 56, 0-20 ಗುಂಟೆ ಸರ್ಕಾರಿ ಕೆರೆಯ ದಾರಿ ಕೊಡಿಗೇಹಳ್ಳಿ ಗ್ರಾಮ

**ಈ ಸರ್ಕಾರಿ ಕೆರೆಯ ದಾರಿಯ ಚಕ್ಕುಬಂದಿ**

ಪೂರ್ವ :
ಪಶ್ಚಿಮ :
ಉತ್ತರ :
ದಕ್ಷಿಣ :

**ವಿ. ನಾರಾಯಣಸ್ವಾಮಿ**
ತಹಸೀಲ್ದಾರ್
ಬೆಂಗಳೂರು ಉತ್ತರ ತಾಲ್ಲೂಕು (ಅಪರ) ಬೆಂಗಳೂರು

ಪಿ.ಆರ್. 121

**ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಇವರ ನಡವಳಿ**

**ಉಪಸ್ಥಿತರು: ಡಾ ಎಸ್.ಎನ್. ರಾಯ್, ಭಾಅಸೇ,**

**ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು**

**ಸಂ:ಬಿ2-ತನಿಖೆ-ಸಿಆರ್-150/96-97 ದಿನಾಂಕ:21/24ನೇ ಜನವರಿ, 2004**

**ವಿಷಯ:** ಕನಕಪುರ ಸಾಮಾಜಿಕ ಅರಣ್ಯ ವಲಯದ ಆಗಿನ ವಲಯ ಅರಣ್ಯಾಧಿಕಾರಿ ಶ್ರೀ ಕೆ.ಆರ್. ಶ್ರೀನಿವಾಸ ಇವರ ವಿರುದ್ಧ ಶಿಸ್ತುಕ್ರಮ ಅಂತಿಮ ಆದೇಶ.

**ಉಲ್ಲೇಖ:**
1. ಈ ಕಚೇರಿಯ ದಿನಾಂಕ: 07.12.1998ರ ಸಮ ಸಂಖ್ಯೆಯ ನೋಟೀಸು.
2. ಈ ಕಚೇರಿಯ ದಿನಾಂಕ: 07.09.1999ರ ಸಮ ಸಂಖ್ಯೆಯ ಅಧಿಕೃತ ಜ್ಞಾಪನ ಪತ್ರ,
3. ವಿಚಾರಣಾಧಿಕಾರಿಗಳು ಹಾಗೂ ಅರಣ್ಯ ಸಂರಕ್ಷಣಾಧಿಕಾರಿ, ಬಳಕೆ ವೃತ್ತ ಇವರ ದಿನಾಂಕ: 26.02.2003ರ ವಿಚಾರಣಾ ವರದಿ.

**ಪ್ರಸ್ತಾವನೆ:**

ಶ್ರೀ ಕೆ.ಆರ್. ಶ್ರೀನಿವಾಸ, ವಲಯ ಅರಣ್ಯಾಧಿಕಾರಿ ಇವರು 1993-94ರ ಅವಧಿಯಲ್ಲಿ ಬೆಂಗಳೂರು ಸಾಮಾಜಿಕ ಅರಣ್ಯ ವಿಭಾಗದ ಕನಕಪುರ ವಲಯದ ಪ್ರಭಾರದಲ್ಲಿ ಇರುವಾಗ ಇವರು ಎಸಗಿದ ಆರ್ಥಿಕ ಅವ್ಯವಹಾರಗಳ ಬಗ್ಗೆ ಈ ಕಚೇರಿಯ ಉಲ್ಲೇಖ (1)ರ ನೋಟೀಸಿನಲ್ಲಿ ಇವರ ವಿರುದ್ಧ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಲಾಗಿತ್ತು. ಶ್ರೀಯುತರು ತಮ್ಮ ದಿನಾಂಕ:0.06.1999ರ ಪ್ರಾಥಮಿಕ ಸಮಜಾಯಿಷಿಯಲ್ಲಿ ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗೆಳೆದಿರುವುದರಿಂದ, ಇವರ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಬಗ್ಗೆ ಈ ಕಚೇರಿಯ ಉಲ್ಲೇಖ (2)ರ ಅಧಿಕೃತ ಜ್ಞಾಪನ ಪತ್ರದಲ್ಲಿ ಅರಣ್ಯ ಬಳಕೆ ವೃತ್ತದ ಅರಣ್ಯ ಸಂರಕ್ಷಣಾಧಿಕಾರಿಗಳನ್ನು ಕೂಲಂಕಷ ವಿಚಾರಣೆ ನಡೆಯಿಸುವ ಬಗ್ಗೆ ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು. ವಿಚಾರಣಾಧಿಕಾರಿಗಳು ವಿಚಾರಣಾ ಪ್ರಕ್ರಿಯೆಯನ್ನು ಮುಕ್ತಾಯಗೊಳಿಸಿ, ಉಲ್ಲೇಖ (3)ರ ವಿಚಾರಣಾ ವರದಿಯನ್ನು ಮಂಡಿಸಿರುತ್ತಾರೆ. ವಿಚಾರಣಾಧಿಕಾರಿಗಳು ತಮ್ಮ ವರದಿಯಲ್ಲಿ ಇವರ ವಿರುದ್ಧದ ಆರೋಪಗಳು ರುಜುವಾತು ಆಗಿರುತ್ತದೆ ಎಂದು ವಿಚಾರಣಾ ಫಲಿತಾಂಶವನ್ನು ನೀಡಿರುತ್ತಾರೆ.

ನಿಯಮಾನುಸಾರ ವಿಚಾರಣಾ ವರದಿಯನ್ನು ಆರೋಪಿತ ನೌಕರರಿಗೆ ಒದಗಿಸಿ, ಎರಡನೇ ಕಾರಣ ಕೇಳುವ ನೋಟೀಸು ನೀಡಿ ಆರೋಪಿತ ನೌಕರರ ಮನವಿಯನ್ನು ಪಡೆದು ಅನಂತರ ಅಂತಿಮ ಆದೇಶ ನೀಡಬೇಕಾಗಿರುತ್ತದೆ. ಆದರೆ ಈ ನೌಕರರು ಗದಗ ಜಲಾನಯನ ಅಭಿವೃದ್ಧಿ ಇಲಾಖೆಯಲ್ಲಿ ನಿಯೋಜನೆಯಲ್ಲಿ ಇರುವಾಗ ದಿನಾಂಕ:10.04.2001ರಿಂದಲೇ ಅನಧಿಕೃತವಾಗಿ ಗೈರು ಹಾಜರಾಗಿದ್ದು, ಇವರು ಎಲ್ಲಿ ಇದ್ದಾರೆ ಎನ್ನುವುದು ಈವರೆಗೂ ಪತ್ತೆಯಾಗಿರುವುದಿಲ್ಲ. ಇವರಿಗೆ ಜಲಾನಯನ ಅಭಿವೃದ್ಧಿ ಇಲಾಖೆ ಅಧಿಕಾರಿಗಳಿಂದ ಮತ್ತು ಈ ಕಚೇರಿಯ ನೆಲೆಯಿಂದ ಇವರ ಅನಧಿಕೃತ ಗೈರುಹಾಜರಿಯ ಕುರಿತು ನೀಡಲಾದ ಯಾವುದೇ ನೋಟೀಸುಗಳೂ ಇವರಿಗೆ ಜಾರಿಯಾಗಿರುವುದಿಲ್ಲ. ಈ ನೋಟೀಸುಗಳನ್ನು ಇವರ ಕರ್ತವ್ಯದ ಕೇಂದ್ರ ಸ್ಥಾನದ ವಿಳಾಸಕ್ಕೆ ಮತ್ತು ಇವರ ಖಾಯಂ ವಿಳಾಸಕ್ಕೆ ಕಳುಹಿಸಿದ್ದರೂ ಜಾರಿಯಾಗಿರುವುದಿಲ್ಲ. ಅದೂ ಅಲ್ಲದೆ ಎರಡೆರಡು ಬಾರಿ ಪತ್ರಿಕಾ ಪ್ರಕಟಣೆಯನ್ನೂ ನೀಡಲಾಗಿತ್ತು. ಆದರೆ ಯಾವ ವಿಧಾನವೂ ಫಲಕಾರಿಯಾಗಿರುವುದಿಲ್ಲ. ಹಾಗಾಗಿ ಇವರು ಈಗ ಎಲ್ಲಿ ವಾಸ್ತವ್ಯದಲ್ಲಿ ಇರುತ್ತಾರೆ ಎಂದು ತಿಳಿಯುವ ಬಗ್ಗೆ ನಡೆಯಿಸಿದ ಎಲ್ಲಾ ಪ್ರಯತ್ನಗಳೂ ವಿಫಲವಾಗಿರುತ್ತದೆ. ಆದುದರಿಂದ ಈ ಪ್ರಕರಣದಲ್ಲಿ ಎರಡನೇ ಕಾರಣ ಕೇಳುವ ನೋಟೀಸು ವಿಫಲ ಪ್ರಕ್ರಿಯೆಯಾಗಿರುತ್ತದೆ. ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ ನಿಯಾಮಾವಳಿಯ ನಿಯಮ 14ರ ಖಂಡ (ii)ರ ಪ್ರಕಾರ ಸಂಬಂಧಪಟ್ಟ ಸರ್ಕಾರಿ ನೌಕರನು ತಲೆಮರೆಸಿಕೊಂಡಿದ್ದರೆ, ಇವರನ್ನು ಲಭ್ಯವಿರುವ ವಿಧಾನಗಳ ಮೂಲಕ ಸಂಪರ್ಕಿಸಲು ಕಾರ್ಯಸಾಧ್ಯವಿಲ್ಲವಾದರೆ, ಶಿಸ್ತು ಪ್ರಾಧಿಕಾರವು ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ ನಿಯಮಾವಳಿಯ ನಿಯಮ 11ರಲ್ಲಿ ನಿರೂಪಿಸಿದ ವಿಧಿ ವಿಧಾನಗಳನ್ನು ಅನುಸರಿಸಬೇಕಾಗಿರುವುದಿಲ್ಲ. ಶ್ರೀ ಕೆ.ಆರ್. ಶ್ರೀನಿವಾಸ ಇವರ ಪ್ರಕರಣವು ಮೇಲೆ ಹೇಳಿದ ನಿಯಮ 14ರ ಖಂಡ (ii)ರ ವ್ಯಾಪ್ತಿಯೊಳಗೆ ಬರುತ್ತದೆ. ಆದುದರಿಂದ ಈ ಪ್ರಕರಣದಲ್ಲಿ ನಿಯಮ 11ರ ವಿಧಿ ವಿಧಾನಗಳನ್ನು ಅನುಸರಿಸಬೇಕಾದ ಅಗತ್ಯ ಇರುವುದಿಲ್ಲ. ಆದರೆ, ಇವರ ಪ್ರಕರಣದಲ್ಲಿ ಕೂಲಂಕಷ ವಿಚಾರಣಾ ಪ್ರಕ್ರಿಯೆ ಮುಕ್ತಾಯವಾಗುವವರೆಗೆ ನಿಯಮ 11ರ ವಿಧಿ ವಿಧಾನಗಳನ್ನು ಅನುಸರಿಸಲಾಗಿದೆ. ವಿಚಾರಣಾಧಿಕಾರಿಗಳ ವರದಿಯ ಪ್ರತಿಯನ್ನು ಒದಗಿಸುವ ಮತ್ತು ಎರಡನೇ ಕಾರಣ ಕೇಳಿ ನೋಟೀಸು ನೀಡುವ ಪ್ರಕ್ರಿಯೆ ಮಾತ್ರ ಬಾಕಿ ಇರುತ್ತದೆ. ಮೇಲೆ ವಿವರಿಸಿದ ಕಾರಣಗಳಿಗಾಗಿ ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ ನಿಯಮಾವಳಿಯ ನಿಯಮ 14ರ ಖಂಡ (ii)ರ ಮೇರೆಗೆ ಈ ಪ್ರಕ್ರಿಯೆಗಳನ್ನು ಕೈಬಿಡಲಾಗಿದೆ.

ವಿಚಾರಣಾಧಿಕಾರಿಗಳ ವರದಿಯ ಕುರಿತು ಅಂತಿಮ ತೀರ್ಮಾನ ತೆಗೆದುಕೊಳ್ಳುವ ಮೊದಲು ಈ ಕೆಳಗಿನ ಅಂಶಗಳ ಬಗ್ಗೆ ಉತ್ತರವನ್ನು ಕಂಡುಕೊಳ್ಳಬೇಕಾಗುತ್ತದೆ.

ಅ) ವಿಚಾರಣಾಧಿಕಾರಿಗಳು ಕೂಲಂಕಷ ವಿಚಾರಣೆಯ ಸಮಯದಲ್ಲಿ ನಿಯಮ 11ರಲ್ಲಿ ನಿರೂಪಿಸಿದ ವಿಧಿ ವಿಧಾನಗಳನ್ನು ಅನುಸರಿಸಿರುತ್ತಾರೆಯೇ?

ಆ) ಇಲ್ಲವಾದಲ್ಲಿ, ಯಾವುದೇ ವಿಚಾರಣಾ ವಿಧಾನದಲ್ಲಿನ ಯಾವುದೇ ಲೋಪದೋಷವು ಆರೋಪಿತ ನೌಕರರ ಪ್ರತಿರಕ್ಷಣೆಯ ಮೇಲೆ ಪ್ರತಿಕೂಲ ವಾತಾವರಣ ಉಂಟುಮಾಡುವಂತಹದ್ದಾಗಿದೆಯೇ?

ಇ) ವಿಚಾರಣಾಧಿಕಾರಿಗಳು ನೀಡಿದ ವಿಚಾರಣಾ ಫಲಿತಾಂಶವು ವಿಚಾರಣೆಯ ಸಮಯದಲ್ಲಿ ಹಾಜರುಪಡಿಸಿದ ಸಾಕ್ಷ್ಯಾಧಾರಗಳು, ವಾದ ಪ್ರತಿವಾದಗಳ ಪರಸ್ಪರ ತುಲನೆಯಿಂದ ಕೂಡಿದವುಗಳಾಗಿರುತ್ತವೆಯೇ?

ವಿಚಾರಣಾ ದಾಖಲೆಗಳನ್ನು ಪರಿಶೀಲಿಸಿದಾಗ ಕೂಲಂಕಷ ವಿಚಾರಣೆಯನ್ನು ನಿಯಮಾನುಸಾರ ಜರುಗಿಸಿರುವುದು ಕಂಡುಬರುತ್ತದೆ. ವಿಚಾರಣಾ ಸಮಯದಲ್ಲಿ ಶಿಸ್ತು ಪ್ರಾಧಿಕಾರದ ಪರವಾಗಿ ಮೂರು ಮಂದಿ ಸಾಕ್ಷಿಗಳನ್ನು ಹಾಜರುಪಡಿಸಿದ್ದು, ಈ ಸಾಕ್ಷಿಗಳ ಮೂಲಕ ಒಟ್ಟು 14 ದಾಖಲೆಗಳನ್ನು ಪ್ರದರ್ಶಿಸಲಾಗಿರುತ್ತದೆ. ಮೌಖಿಕ ವಿಚಾರಣೆಗೆ ವಿಚಾರಣಾಧಿಕಾರಿಗಳು ಒಟ್ಟು 17 ಬಾರಿ ದಿನಾಂಕವನ್ನು ನಿಗದಿಪಡಿಸಿದ್ದು, ಆರೋಪಿತ ನೌಕರರು ಮೊದಲ ಎರಡು ಬಾರಿಯನ್ನು ಹೊರತುಪಡಿಸಿದರೆ, ಉಳಿದ ಎಲ್ಲಾ ದಿನಾಂಕಗಳಂದು ನಿರಂತರವಾಗಿ ಗೈರುಹಾಜರಾಗಿರುತ್ತಾರೆ. ಆದುದರಿಂದ ತಮ್ಮ ಪ್ರತಿರಕ್ಷಣೆಗೆ ಇರುವ ಅವಕಾಶಗಳನ್ನು ಆರೋಪಿತ ನೌಕರರು ತಮ್ಮ ವೈಫಲ್ಯದಿಂದಲೇ ಕಳೆದುಕೊಂಡಿರುತ್ತಾರೆ. ಆದುದರಿಂದ ಪ್ರಶ್ನೆ (ಅ)ಗೆ ಉತ್ತರ "ಹೌದು" ಮತ್ತು ಪ್ರಶ್ನೆ (ಆ)ಗೆ ಉತ್ತರ "ಉದ್ಭವಿಸುವುದಿಲ್ಲ" ಎಂದೂ ಪರಿಗಣಿಸಲಾಗಿದೆ.

ಆಪಾದನ ಪರ ಸಾಕ್ಷಿ 1ರವರ ಹೇಳಿಕೆ ಮತ್ತು ಪ್ರದರ್ಶಿತ ದಾಖಲೆ 1 ಮತ್ತು 2ರ ಪ್ರಕಾರ ಆರೋಪಿತ ನೌಕರರು ಮುಂಗಡ ಪಡೆದ ರೂ. 15,000-00ಗಳನ್ನು ಸಂಬಂಧಿಸಿದವರಿಗೆ ಬಟವಾಡೆ ಮಾಡದೇ, ಈ ಬಗ್ಗೆ ಲೆಕ್ಕಪತ್ರಗಳನ್ನು ಮಂಡಿಸದೇ ರೂ. 15,000-00ಗಳನ್ನು ದುರುಪಯೋಗ ಪಡಿಸಿರುವುದು ರುಜುವಾತು ಆಗಿರುತ್ತದೆ. ಆಪಾದನಾ ಪರ ಸಾಕ್ಷಿ 1ರವರ ಹೇಳಿಕೆ ಮತ್ತು ಪ್ರದರ್ಶಿತ ದಾಖಲೆ 1,2,3,4,6,7,8 ಮತ್ತು 14ರ ಪ್ರಕಾರ ಆರೋಪಿತ ನೌಕರರು ಕೂಲಿಯವರಿಗೆ ವಿತರಿಸಬೇಕಾದ ಆಹಾರ ಧಾನ್ಯವನ್ನು ಮಾರಾಟ ಮಾಡಿ ಸರಕಾರಕ್ಕೆ ರೂ.11,440-00 ಆರ್ಥಿಕ ನಷ್ಟ ಉಂಟುಮಾಡಿರುವುದು ದೃಢಪಟ್ಟಿರುತ್ತದೆ. ಆರೋಪಣ ಪರ ಸಾಕ್ಷಿ 1, 2 ಮತ್ತು 3ರವರ ಹೇಳಿಕೆ ಮತ್ತು ಪ್ರದರ್ಶಿತ ದಾಖಲೆ 1, 2, 4, 12, 13 ಮತ್ತು 14ರ ಪ್ರಕಾರ ಇಲಾಖೆಯ ನೆಲೆಯಿಂದ ಬೆಳೆಸಿದ 18,000 ತೇಗದ ಸಸಿಗಳನ್ನು ರೂ. 1.50 ರಂತೆ ಮಾರಾಟ ಮಾಡಿದ್ದರೂ, ಮಾರಾಟದ ಮೌಲ್ಯ ರೂ. 27,000-00ನ್ನು ಇಲಾಖೆಯ ಲೆಕ್ಕಕ್ಕೆ ಜಮೆ ಮಾಡದೇ ದುರುಪಯೋಗ ಪಡಿಸಿರುವುದು ದೃಢಪಟ್ಟಿರುತ್ತದೆ. ಹೀಗೆ ಆರೋಪಿತ ನೌಕರರು ಒಟ್ಟು ರೂ. 53,449-00ಗಳನ್ನು ದುರುಪಯೋಗಪಡಿಸಿಕೊಂಡಿರುವುದು ದೃಢಪಟ್ಟಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ ವಲಯ ಅರಣ್ಯಾಧಿಕಾರಿ ಶ್ರೀ ಕೆ.ಆರ್. ಶ್ರೀನಿವಾಸ ಇವರ ವಿರುದ್ಧದ ಆರೋಪಗಳು ರುಜುವಾತು ಆಗಿರುವುದರಿಂದ ಮತ್ತು ಈ ಆರೋಪವು ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ 1988ರ ವಿಧಿ 13ರ ವ್ಯಾಪ್ತಿಯೊಳಗೆ ಬರುವುದರಿಂದ, ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ ನಿಯಾಮಾವಳಿಯ ನಿಯಮ 8ರ ಪರಂತುಕದ ಮೇರೆಗೆ ಶ್ರೀಯುತರನ್ನು ಸರಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ಈ ಮೂಲಕ ವಿಧಿಸಲಾಗಿದೆ.

ಅಲ್ಲದೆ ಇವರು ದುರುಪಯೋಗಪಡಿಸಿಕೊಂಡ ಸರಕಾರಿ ಹಣ ರೂ. 53,449-00ಗಳನ್ನು ಮತ್ತು ರೂ. 26,449-00ಕ್ಕೆ ದಿನಾಂಕ: 01.04.1994 ರಿಂದ ಶೇಕಡಾ 8ರಂತೆ ಬಡ್ಡಿ ರೂ.20,806-00, ರೂ. 27,000-00ಕ್ಕೆ ದಿನಾಂಕ:01.12.1993ರಿಂದ ಶೇಕಡಾ 8ರಂತೆ ಬಡ್ಡಿ ರೂ. 21,960-00, ಹೀಗೆ ಒಟ್ಟು ರೂ. 96,215-00ಗಳನ್ನು ಇವರ ಈ ಕೆಳಗಿನ ಮೂಲಗಳಿಂದ ವಸೂಲು ಮಾಡುವಂತೆ ಈ ಮೂಲಕ ಆದೇಶಿಸಲಾಗಿದೆ.

ಅ) ಸಾಮೂಹಿಕ ವಿಮಾ ಯೋಜನೆಯಲ್ಲಿ ಇವರ ಉಳಿತಾಯ ಖಾತೆಯಲ್ಲಿ ಇರುವ ಮೊತ್ತದಿಂದ;

ಆ) ಬಾಕಿ ಉಳಿದ ಮೊತ್ತವನ್ನು ಇವರ ಕೆ.ಜಿ.ಐ.ಡಿ. ಪಾಲಿಸಿ ಸಂಖ್ಯೆ:1160385, 719085, 1324886 ಮತ್ತು 1440879ರ surrender value ನಿಂದ ಮುಟ್ಟುಗೋಲು ಹಾಕಿರುವುದರಿಂದ;

ಇ) ಮತ್ತೂ ಕಡಿಮೆ ಬಿದ್ದರೆ ಸಾಮಾನ್ಯ ಭವಿಷ್ಯ ನಿಧಿ ಖಾತೆ ಸಂಖ್ಯೆ: ಎ.ಎಫ್. 12090ರಲ್ಲಿಂದ ಮುಟ್ಟುಗೋಲು ಹಾಕಿರುವುದರಿಂದ.

ಈ ಆದೇಶದ ಪ್ರತಿಯನ್ನು ಇವರ ಸೇವಾ ವಹಿಯಲ್ಲಿ ಭದ್ರವಾಗಿ ಅಂಟಿಸುವುದು ಮತ್ತು ಆದೇಶದ ಸಾರಾಂಶವನ್ನು ಇವರ ಸೇವಾ ವಹಿಯ ಭಾಗ ನಾಲ್ಕರಲ್ಲಿ ನಮೂದಿಸುವುದು.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ
ಮತ್ತು ಶಿಸ್ತು ಪ್ರಾಧಿಕಾರ.

ಪಿ.ಆರ್. 122

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ, ಬೆಳಗಾಂವ ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂಖ್ಯೆ:** ಅಬಕಾರಿ ಸಬ್ ಇನ್‌ಸ್ಪೆಕ್ಟರ್, ಇ.ಐ.ಬಿ, ಬೆಳಗಾಂವ ಇವರ ಪ್ರಥಮ ಮಾಹಿತಿ ವರದಿ ಸಂಖ್ಯೆ 9/94-95 ದಿನಾಂಕ:22.09.1994.

**ಆದೇಶ ಸಂಖ್ಯೆ:ಇಎಕ್ಸ್‌ಇ/ಡಿಟಿಸಿಆರ್/ಸಿಆರ್‌ಎಂ/1/94-95 ದಿನಾಂಕ:26.12.2003.**

**ಉಪಸ್ಥಿತರು:** ಶ್ರೀ ಪಿ.ಎನ್. ಮುರಗೋಡ
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಬೆಳಗಾಂವ ಜಿಲ್ಲೆ, ಬೆಳಗಾಂವ.

| ಫಿರ್ಯಾದಿ: | ವಿರುದ್ಧ | ಆರೋಪಿತರು: |
|---|---|---|
| ಶ್ರೀ ಪಿ.ಡಿ. ಬೊಮ್ಮನಾಯ್ಕ<br>ಅಬಕಾರಿ ಸಬ್ ಇನ್‌ಸ್ಪೆಕ್ಟರ್<br>ಇ.ಐ.ಬಿ., ಬೆಳಗಾಂವ. | | 1. ಶ್ರೀ ಕಾಶಿನಾಥಸಾ ಖೇಮಸಾ ಖೋಡೆ,<br>ಮನೆ ನಂ. 20, 1ನೇ ಅಡ್ಡ ರಸ್ತೆ,<br>ಕಮರಿಪೇಟೆ, ಹುಬ್ಬಳ್ಳಿ, ಧಾರವಾಡ ಜಿಲ್ಲೆ-ವಾಹನ ಮಾಲಿಕ.<br>2. ಶ್ರೀ ಪಾಂಡುಸಾ ತಂದೆ ಲಕ್ಷ್ಮಣಸಾ ಹಬೀಬ<br>ಅರಳಿಕಟ್ಟಿ ಓಣಿ, ಹುಬ್ಬಳ್ಳಿ- ವಾಹನ ಚಾಲಕ<br>3. ಜವಾಹರಸಾ ತಂದೆ ನಾರಾಯಣಸಾ ಭಾಂಡಗೆ<br>ಚನ್ನಪೇಟೆ, ಹಳೇ ಹುಬ್ಬಳ್ಳಿ -(ಉದ್ಯೋಗ-ವೆಲ್ಡಿಂಗ್ ಕೆಲಸ)<br>4. ಶ್ರೀ ಶ್ರೀನಿವಾಸ ಪರಶುರಾಮಸಾ ಹಬೀಬ<br>ಕಮರಿಪೇಟೆ, ಹುಬ್ಬಳ್ಳಿ -(ಉದ್ಯೋಗ ವಿದ್ಯಾರ್ಥಿ) |

**ಪ್ರಸ್ತಾವನೆ:**

ದಿನಾಂಕ:22.09.1994 ರಂದು ಈ ಪ್ರಕರಣದ ಫಿರ್ಯಾದಿಯಾದ ಶ್ರೀ ಪಿ.ಡಿ. ಬೊಮ್ಮನಾಯ್ಕ, ಅಬಕಾರಿ ಸಬ್ ಇನ್‌ಸ್ಪೆಕ್ಟರ್, ಇಐಬಿ, ಬೆಳಗಾಂವ ಇವರು ಅಬಕಾರಿ ಉಪ ಅಧೀಕ್ಷಕರು, ಇಐಬಿ, ಬೆಳಗಾಂವ, ಅಬಕಾರಿ ಇನ್‌ಸ್ಪೆಕ್ಟರ್, ಇ.ಐ.ಬಿ. ಬೆಳಗಾಂವ ಹಾಗೂ ಸಿಬ್ಬಂದಿ ಮತ್ತು ಇಬ್ಬರು ಪಂಚರೊಂದಿಗೆ ಪಿ.ಬಿ. ರೋಡಿನ ಮೇಲೆ ಹಲಗಾ ಗ್ರಾಮದ ಹತ್ತಿರ ರಸ್ತೆ ಕಾವಲು ಮಾಡುತ್ತಿರುವಾಗ ಬೆಳಗಿನ ಜಾವ ಸುಮಾರು 5-00 ಗಂಟೆಗೆ ಹುಬ್ಬಳ್ಳಿ ಕಡೆಯಿಂದ ಬೆಳಗಾಂವ ಕಡೆಗೆ ಹಸಿರು ಬಣ್ಣದ ಒಂದು ಮೆಟಡೋರ್ ಬರುವುದನ್ನು ಕಂಡು ಅದನ್ನು ನಿಲ್ಲಿಸಿ ಅದರ ಸಂಖ್ಯೆ ನೋಡಲಾಗಿ ಅದು ಕೆಎ-25-4445 ಇದ್ದದು ಕಂಡು ಬಂದಿತು. ಅದರಲ್ಲಿ 3 ಜನರಿದ್ದು, ಅವರ ಹೆಸರುಗಳನ್ನು ಕೇಳಲಾಗಿ ಅವರು ತಮ್ಮ ಹೆಸರು ಶ್ರೀ ಪಾಂಡುಸಾ ತಂದೆ ಲಕ್ಷ್ಮಣಸಾ ಹಬೀಬ, ಅರಳಿಕಟ್ಟಿ ಓಣಿ, ಹುಬ್ಬಳ್ಳಿ, ವಾಹನ ಚಾಲಕ ಎಂತಲೂ ಹಾಗೂ ಎರಡನೆಯವನು ತನ್ನ ಹೆಸರು ಶ್ರೀ ಜವಾಹರಸಾ ತಂದೆ ನಾರಾಯಣಸಾ ಭಾಂಡಗೆ, ಚನ್ನಪೇಟೆ, ಹಳೆ ಹುಬ್ಬಳ್ಳಿ, ಉದ್ಯೋಗ ವೆಲ್ಡಿಂಗ್ ಕೆಲಸ ಎಂತಲೂ ಹಾಗೂ ಮೂರನೆಯವನು ತನ್ನ ಹೆಸರು ಶ್ರೀ ಶ್ರೀನಿವಾಸ ಪರಶುರಾಮಸಾ ಹಬೀಬ, ಕಮರಿಪೇಟೆ, ಹುಬ್ಬಳ್ಳಿ, ಉದ್ಯೋಗ ವಿದ್ಯಾರ್ಥಿ ಎಂತಲೂ ಹೇಳಿದರು. ಸದರಿ ವಾಹನವನ್ನು ತಪಾಸಿಸಿ ನೋಡಲಾಗಿ ಅದರಲ್ಲಿ ರಟ್ಟಿನ ಪೆಟ್ಟಿಗೆಗಳ ದಾಸ್ತಾನು ಇದ್ದದ್ದು ಕಂಡು ಬಂದಿತು. ಸದರಿ ಪೆಟ್ಟಿಗೆಗಳಲ್ಲಿ ಏನಿದೆ ಎಂದು ಡ್ರೈವರ್‌ನನ್ನು ಕೇಳಲಾಗಿ ಅದರಲ್ಲಿ ಮದ್ಯ ಇದೆ ಎಂದು ಹೇಳಿದನು. ಸದರಿ ಮದ್ಯವನ್ನು ಸಾಗಾಣಿಕೆ ಮಾಡಲು ರಹದಾರಿ ಪತ್ರ ಅಥವಾ ಯಾವುದಾದರೂ ದಾಖಲಾತಿಗಳು ಇವೆಯೋ ಎಂದು ಕೇಳಲಾಗಿ ಅವನು ಇಲ್ಲ ಎಂದು ಹೇಳಿದನು. ಸದರಿ ಪೆಟ್ಟಿಗೆಗಳನ್ನು ನೋಡಲಾಗಿ ಒಟ್ಟು 70 ಪೆಟ್ಟಿಗೆಗಳಿದ್ದು, ಅದರಲ್ಲಿದ್ದ ಮದ್ಯದ ವಿವರವು ಈ ಕೆಳಗಿನಂತೆ ಇರುತ್ತದೆ.

1. ಪ್ರತಿಯೊಂದರಲ್ಲಿ 48 ಬಾಟಲಿ 180 ಎಂ.ಎಲ್‌ದ ರಾಯಲ್ ಸ್ಪೆಶಲ್ ವ್ಹಿಸ್ಕಿಯ ಒಟ್ಟು 20 ಪೆಟ್ಟಿಗೆಗಳು.
2. ಪ್ರತಿಯೊಂದರಲ್ಲಿ 12 ಬಾಟಲಿ 750 ಎಂ.ಎಲ್‌ದ ರಾಯಲ್ ಸ್ಪೆಶಲ್ ವ್ಹಿಸ್ಕಿಯ ಒಟ್ಟು 20 ರಟ್ಟಿನ ಪೆಟ್ಟಿಗೆಗಳು.
3. ಪ್ರತಿಯೊಂದರಲ್ಲಿ 24 ಬಾಟಲಿ 375 ಎಂ.ಎಲ್‌ದ ರಾಯಲ್ ಸ್ಪೆಶಲ್ ವ್ಹಿಸ್ಕಿಯ ಒಟ್ಟು 10 ರಟ್ಟಿನ ಪೆಟ್ಟಿಗೆಗಳು.
4. ಪ್ರತಿಯೊಂದರಲ್ಲಿ 12 ಬಾಟಲಿ 750 ಎಂ.ಎಲ್‌ದ ಆಫೀಸರ್ ಚಾಯ್ಸ್ ವ್ಹಿಸ್ಕಿಯ 2 ರಟ್ಟಿನ ಪೆಟ್ಟಿಗೆಗಳು.
5. ಪ್ರತಿಯೊಂದರಲ್ಲಿ 12 ಬಾಟಲಿ 750 ಎಂ.ಎಲ್‌ದ ಬ್ಯಾಗ್ ಪೈಪರ್ ವ್ಹಿಸ್ಕಿಯ 8 ರಟ್ಟಿನ ಪೆಟ್ಟಿಗೆಗಳು.
6. ಪ್ರತಿಯೊಂದರಲ್ಲಿ 12 ಬಾಟಲಿ 750 ಎಂ.ಎಲ್‌ದ ಮೆಕ್‌ಡೆವೆಲ್ ಡಿಪ್ಲೋಮೆಟ್ ವ್ಹಿಸ್ಕಿಯ 3 ರಟ್ಟಿನ ಪೆಟ್ಟಿಗೆಗಳು.
7. ಪ್ರತಿಯೊಂದರಲ್ಲಿ 12 ಬಾಟಲಿ 750 ಎಂ.ಎಲ್‌ದ ಡೈರೆಕ್ಟರ್ ಸ್ಪೆಶೆಲ್ ವ್ಹಿಸ್ಕಿಯ 5 ರಟ್ಟಿನ ಪೆಟ್ಟಿಗೆಗಳು.
8. ಪ್ರತಿಯೊಂದರಲ್ಲಿ 12 ಬಾಟಲಿ 750 ಎಂ.ಎಲ್‌ದ ಹೇವರ್ಡ ಫೈನ್ ವ್ಹಿಸ್ಕಿಯ 2 ರಟ್ಟಿನ ಪೆಟ್ಟಿಗೆಗಳು.

ಒಟ್ಟು 70 ಪೆಟ್ಟಿಗೆಗಳು- 622.800 ಲೀಟರ್

ನಂತರ ಮೇಲಿನ ಎಂಟೂ ರಟ್ಟಿನ ಪೆಟ್ಟಿಗೆಗಳಿಂದ ಒಂದೊಂದರಂತೆ ಬಾಟಲಿಗಳನ್ನು ರಸಾಯನಿಕ ಪರೀಕ್ಷೆಗಾಗಿ ತೆಗೆದು ಸೀಲು ಮಾಡಿ ತಮ್ಮ ಹಾಗೂ ಪಂಚರ ಸಹಿ ಚೀಟಿಗಳನ್ನು ಅಂಟಿಸಿದ್ದಾರೆ. ವಾಹನ ಹಾಗೂ ಮದ್ಯದ ಪೆಟ್ಟಿಗೆಗಳನ್ನು ಜಪ್ತಿ ಮಾಡಿ ತಮ್ಮ ವಶಕ್ಕೆ ತೆಗೆದುಕೊಂಡಿದ್ದಾರೆ. ಹಾಗೂ ಆರೋಪಿಗಳನ್ನು ದಸ್ತಗಿರಿ ಮಾಡಿ ನಂತರ ಜಾಮೀನಿನ ಮೇಲೆ ಬಿಡುಗಡೆ ಮಾಡಿದ್ದಾರೆ. ಈ ಬಗ್ಗೆ ಸ್ಥಳದಲ್ಲಿ ಬೆಳಗಿನ ಜಾವ ಸುಮಾರು 6.00 ಗಂಟೆಗೆ ಪಂಚನಾಮೆಯನ್ನು ತಯಾರಿಸಿದ್ದಾರೆ. ನಂತರ ಸರಕಾರದ ಪರವಾಗಿ ಅವರೇ ಫಿರ್ಯಾದಿಯಾಗಿ ವಾಹನ ಚಾಲಕ ಹಾಗೂ ಇತರೇ ಇಬ್ಬರ ಮೇಲೆ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 13, 14, 34, 35 (ಎ) ಮತ್ತು 43 ರ ಪ್ರಕಾರ ಫಿರ್ಯಾದನ್ನು ಸಲ್ಲಿಸಿ ಗುನ್ಹೆ ನಂ. 9/94-95 ದಿನಾಂಕ: 22.09.1994ನ್ನು ದಾಖಲಿಸಿಕೊಂಡಿದ್ದಾರೆ. ಮತ್ತು ಮುದ್ದೆ ಮಾಲುಗಳ ಬಗ್ಗೆ ಮುಂದಿನ ಕ್ರಮಕ್ಕಾಗಿ ಅಧಿಕೃತ ಅಧಿಕಾರಿಯವರಿಗೆ ವರದಿ ಸಲ್ಲಿಸಿರುತ್ತಾರೆ.

ನಂತರ ಶ್ರೀಮತಿ ಎಸ್.ಎನ್. ನಾಯಕ, ಅಡ್ವೋಕೇಟ್, ಬೆಳಗಾಂವ ಇವರು ವಾಹನ ಮಾಲಿಕರಾದ ಶ್ರೀ ಕಾಶಿನಾಥಸಾ ಖೇಮಸಾ ಖೋಡೆ, ಮ.ನಂ. 20, 1ನೇ ಅಡ್ಡ ರಸ್ತೆ, ಕಮರಿ ಪೇಟೆ, ಹುಬ್ಬಳ್ಳಿ ಇವರ ಪರವಾಗಿ ತಮ್ಮ ಅರ್ಜಿ ದಿನಾಂಕ:03.07.1995 ಹಾಗೂ 27.06.1996ನ್ನು ಸಲ್ಲಿಸಿ ಸದರಿ ವಾಹನದ ಮಧ್ಯಂತರ ಬಿಡುಗಡೆಗಾಗಿ ವಿನಂತಿಸಿಕೊಂಡಿದ್ದಾರೆ. ನಂತರ ಈ ಪ್ರಾಧಿಕಾರದಿಂದ ಅಬಕಾರಿ ಕಾಯ್ದೆ ಕಲಂ 43(ಬಿ) ಪ್ರಕಾರ ವಾಹನ ಮಾಲಿಕರಿಗೆ ಕಾರಣ ಕೇಳುವ ನೋಟೀಸ್ ನೀಡಲಾಯಿತು. ವಾಹನ ಮಾಲಿಕರು ಸದರಿ ನೋಟೀಸನ್ನು ದಿನಾಂಕ: 03.01.96 ರಂದು ಪಡೆದಿರುತ್ತಾರೆ. ದಿನಾಂಕ:28.06.1996 ರಂದು ಎ.ಡಿ.ಪಿ. ಯವರು ಸದರಿ ಅರ್ಜಿಗೆ ತಮ್ಮ ತಕರಾರನ್ನು ಸಲ್ಲಿಸಿದ್ದಾರೆ.

ನಂತರ ವಾದ ವಿವಾದಗಳನ್ನು ಕೇಳಲಾಯಿತು. ಸದರಿ ವಾಹನವು ಈ ಕಛೇರಿಯ ಮುಂದುಗಡೆ ನಿಲ್ಲಿಸಿದ್ದು, ಅದಕ್ಕೆ ಯಾವುದೇ ರಕ್ಷಣೆ ಇರುವುದಿಲ್ಲ. ಅಂದರೆ ಅದು ಮಳೆ, ಗಾಳಿ ಮತ್ತು ಬಿಸಿಲಿಗೆ ಸಿಕ್ಕಿ ಹಾಳಾಗುವ ಸಂಭವ ಇರುವುದರಿಂದ ಸದರಿ ವಾಹನವನ್ನು ಸಾಕಷ್ಟು ಭದ್ರತೆಯೊಂದಿಗೆ ತಾತ್ಕಾಲಿಕವಾಗಿ ಬಿಡುಗಡೆ ಮಾಡುವುದು ಸೂಕ್ತ ಎಂದು ಕಂಡು ಬಂದಿದ್ದರಿಂದ ಕೆಲವು ಷರತ್ತುಗಳೊಂದಿಗೆ ವಾಹನ ಮಾಲಿಕರು ರೂ. ಎರಡು ಲಕ್ಷಗಳಿಗೆ ಬ್ಯಾಂಕ್ ಗ್ಯಾರಂಟಿ ಹಾಗೂ ಅದೇ ಮೊತ್ತಕ್ಕೆ ಸಮನಾದ ನಷ್ಟ ಭರ್ತಿ ಪತ್ರ ಹಾಗೂ ಎರಡು ಜಾಮೀನುಗಳನ್ನು ನೀಡುವ ಷರತ್ತಿನೊಂದಿಗೆ ಸದರಿ ವಾಹನವನ್ನು ವಾಹನ ಮಾಲಿಕರ ಸುಬರ್ದಿಗೆ ತಾತ್ಕಾಲಿಕವಾಗಿ ಬಿಡುಗಡೆ ಮಾಡಲು ಆದೇಶ ಸಂ. ಇಎಕ್ಸ್‌ಇ/ಬಿಜಿಎಂ/ ಸಿಆರ್‌ಎಂ/1/94-95 ದಿನಾಂಕ: 11.07.1996ರಲ್ಲಿ ಆದೇಶಿಸಲಾಯಿತು. ಆದರೆ ಈ ಆದೇಶವನ್ನು ಪ್ರಶ್ನಿಸಿ ಆರೋಪಿತರು ಮಾನ್ಯ ಪ್ರಿನ್ಸಿಪಲ್ ಸೆಶೆನ್ ಜಡ್ಜ್, ಬೆಳಗಾಂವ ಇವರ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲು ನಂ. 70/1996ರ ಪ್ರಕಾರ ಅರ್ಜಿ ಸಲ್ಲಿಸಿದ್ದರು. ಮಾನ್ಯ ನ್ಯಾಯಾಲಯವು ತನ್ನ ಆದೇಶ ದಿನಾಂಕ: 01.08.1996ರಲ್ಲಿ ಸದರಿ ವಾಹನವನ್ನು ವಾಹನ ಮಾಲಿಕರಿಗೆ ರೂ. 1,00,000/- (ರೂ. ಒಂದು ಲಕ್ಷ ಮಾತ್ರ)ದ ಇಂಡೆಮ್ನಿಟಿ ಬಾಂಡ್ ಹಾಗೂ ಅದೇ ಮೊತ್ತದ ಒಂದು ಜಾಮೀನನ್ನು ಪಡೆದು ಈ ಪ್ರಕರಣ ಇತ್ಯರ್ಥವಾಗುವವರೆಗೆ ತಾತ್ಕಾಲಿಕವಾಗಿ ವಾಹನ ಮಾಲಿಕರ ಸುಬರ್ದಿಗೆ ಬಿಡುಗಡೆ ಮಾಡಲು ಆದೇಶಿಸಿತು.

ಅದರಂತೆ ವಾಹನ ಮಾಲಿಕರಾದ ಶ್ರೀ ಕಾಶಿನಾಥಸಾ ಖೇಮಸಾ ಖೋಡೆ, ಹುಬ್ಬಳ್ಳಿ ಇವರು ತಮ್ಮ ವಕೀಲರಾದ ಶ್ರೀಮತಿ ಎಸ್.ಎನ್. ನಾಯಕ ಇವರ ಮುಖಾಂತರ ರೂ. 1,00,000- (ರೂ. ಒಂದು ಲಕ್ಷ ಮಾತ್ರ) ಗಳ ನಷ್ಟ ಭರ್ತಿ ಬಾಂಡ್ ಮತ್ತು ತಹಶೀಲ್ದಾರ್, ಹುಬ್ಬಳ್ಳಿ ಇವರು ನೀಡಿದ ರೂ. ಒಂದು ಲಕ್ಷ ಕ್ಕೆ ಸಾಲ್ವೆಂಟ್ ಪ್ರಮಾಣ ಪತ್ರ ಸಲ್ಲಿಸಿದ್ದರಿಂದ, ಸದರಿ ವಾಹನ ಮೆಟಡೋರ್ ನಂ.ಕೆಎ-25-4445 ನ್ನು ತಾತ್ಕಾಲಿಕವಾಗಿ ವಾಹನ ಮಾಲಿಕರ ಸುಬರ್ದಿಗೆ ಬಿಡಲು ಈ ಕಛೇರಿಯ ಮೆಮೊ ನಂ. ಇಎಕ್ಸ್‌ಇ/ಬಿಜಿಎಂ/ಸಿಆರ್‌ಎಂ/1/94-95 ದಿನಾಂಕ:31.03.1997ರಲ್ಲಿ ಆದೇಶಿಸಲಾಯಿತು.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರಕಾರದ ಪರವಾಗಿ ಫಿರ್ಯಾದಿ ಹಾಗೂ ಪಂಚರ ಹೇಳಿಕೆಯನ್ನು ಪಡೆಯಲಾಗಿದೆ. ಹಾಗೂ 8 ದಾಖಲೆಗಳನ್ನು ಗುರುತಿಸಲಾಗಿದೆ.

ಈ ಪ್ರಕರಣದಲ್ಲಿ ಸರ್ಕಾರದ ಪರವಾಗಿ ಒದಗಿಸಲಾಗಿರುವ ಸಾಕ್ಷ್ಯಾಧಾರದಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿರುವುದರಿಂದ ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1. ದಿನಾಂಕ: 22.09.1994 ರಂದು ವಾಹನ ಮೆಟಡೋರ್ ಸಂ. ಕೆಎ-25-4445ದಲ್ಲಿ ಮದ್ಯವನ್ನು ಸಾಗಾಟ ಮಾಡಲಾಗಿದೆಯೆ?
2. ಸದರಿ ವಾಹನದಲ್ಲಿ ಮದ್ಯದ ಸಾಗಾಟವನ್ನು ತಮ್ಮ ತಿಳುವಳಿಕೆಗೆ ಬಾರದಂತೆ ಮಾಡಲಾಗಿತ್ತು ಎಂದು ವಾಹನ ಮಾಲಿಕರು ಸಿದ್ದಪಡಿಸಿದ್ದಾರೆಯೇ?
3. ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೆ?

ಈ ಮೇಲೆ ತಿಳಿಸಿದ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇಯ ಅಂಶವನ್ನು ಗುಣಾತ್ಮಕವಾಗಿ, ಎರಡನೇಯ ಅಂಶವನ್ನು ನಕಾರಾತ್ಮಕವಾಗಿ ಹಾಗೂ ಮೂರನೇಯ ಅಂಶವನ್ನು ಕೊನೆಯ ಆದೇಶದಂತೆ.

ಪ್ರಾ.ಸಾ-1 ರಾದ ಶ್ರೀ ಪಿ.ಡಿ. ಬೊಮ್ಮನಾಯ್ಕ, ಅಬಕಾರಿ ಸಬ್ ಇನ್ಸ್‌ಪೆಕ್ಟರ್ (ಈಗ ನಿವೃತ್ತರಾಗಿದ್ದಾರೆ) ಇವರು ಈ ಪ್ರಾಧಿಕಾರದ ಮುಂದೆ ದಿನಾಂಕ:13.02.2003ರಂದು ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿದ್ದಾರೆ. ತಮ್ಮ ಹೇಳಿಕೆಯಲ್ಲಿ ಸದರಿಯವರು ದಿನಾಂಕ:13.09.1994 ರಿಂದ 31.07.1998ರ ವರೆಗೆ ಬೆಳಗಾಂವಿಯ ಇ.ಐ.ಬಿ. ಯಲ್ಲಿ ಅಬಕಾರಿ ಸಬ್ ಇನ್ಸ್‌ಪೆಕ್ಟರ್‌ರೆಂದು ಕಾರ್ಯನಿರ್ವಹಿಸಿದ್ದಾಗಿ ತಿಳಿಸಿ, ಈ ಪ್ರಕರಣದಲ್ಲಿ ಸದರಿಯವರು ಫಿರ್ಯಾದಿ ಇರುವುದಾಗಿ ತಿಳಿಸಿದ್ದಾರೆ. ಸದರಿಯವರು ದಿನಾಂಕ: 22.09.1994ರಂದು ತಮ್ಮ ಸಿಬ್ಬಂದಿ ಹಾಗೂ ಪಂಚರೊಂದಿಗೆ ಬೆಳಗಾಂವ ತಾಲ್ಲೂಕಿನ ಹಲಗಾ ಗ್ರಾಮದ ಹತ್ತಿರ ಸರ್ಕಾರಕ್ಕೆ ಕರ ಕೊಡದ ಭಾರತೀಯ ಮದ್ಯದ ಅಕ್ರಮ ಸಾಗಾಣಿಕೆ ನಡೆಯುತ್ತಿದೆ ಎಂದು ಬಂದ ಖಚಿತ ವರ್ತಮಾನ ಪ್ರಕಾರ ರಸ್ತೆ ಕಾವಲು ಮಾಡುತ್ತಿದ್ದಾಗ ನಸುಕಿನ 5:00 ಗಂಟೆಯ ಸುಮಾರಿಗೆ ಹುಬ್ಬಳ್ಳಿ ಕಡೆಯಿಂದ ಬೆಳಗಾಂವ ಕಡೆಗೆ ಒಂದು ಹಸಿರು ಬಣ್ಣದ ಮೆಟಡೋರ್ ವಾಹನ ರಿಜಿಸ್ಟ್ರೇಶನ್ ನಂ. ಕೆಎ-25-4445 ಬರುತ್ತಿದ್ದುದನ್ನು ನಿಲ್ಲಿಸಿ ತಪಾಸಣೆ ಮಾಡಿದ್ದಾಗಿಯೂ ಹಾಗೂ ವಾಹನ ಶೋಧನೆ ಬಗ್ಗೆ ಕಾಲಾವಕಾಶ ಇಲ್ಲದ ಕಾರಣ ಸಕಾರಣಗಳನ್ನು ನಮೂದಿಸಿ ವಾಹನ ಶೋಧನೆ ಮಾಡಲು ವಾಹನದಲ್ಲಿ ಒಟ್ಟು 70 ರಟ್ಟಿನ ಪೆಟ್ಟಿಗೆಗಳು ಕಂಡು ಬಂದಿದ್ದಾಗಿಯೂ ಅವುಗಳನ್ನು ತೆಗೆದು ನೋಡಲಾಗಿ:

1. 20ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 180 ಎಂ.ಎಲ್‌ದ 48 ರಾಯಲ್ ಸ್ಪೆಶಲ್ ವ್ಹಿಸ್ಕಿ ಬಾಟಲಿಗಳು.
2. 20ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 750 ಎಂ.ಎಲ್‌ದ 12ರಂತೆ ರಾಯಲ್ ಸ್ಪೆಶಲ್ ವ್ಹಿಸ್ಕಿ ಬಾಟಲಿಗಳು.
3. 10 ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 375 ಎಂ.ಎಲ್‌ದ 24 ರಂತೆ ರಾಯಲ್ ಸ್ಪೆಶಲ್ ವ್ಹಿಸ್ಕಿ ಬಾಟಲಿಗಳು.
4. 2 ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 750 ಎಂ.ಎಲ್‌ದ 12 ಆಫೀಸರ್ಸ್ ಚಾಯ್ಸ್ ವ್ಹಿಸ್ಕಿ ಬಾಟಲಿಗಳು.
5. 8 ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 750 ಎಂ.ಎಲ್‌ದ 12 ಬೈಗ್ ಪೈಪರ್ ವ್ಹಿಸ್ಕಿ ಬಾಟಲಿಗಳು.
6. 3 ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 750 ಎಂ.ಎಲ್‌ದ 12 ಮೆಕ್‌ಡೆವೆಲ್ ಡಿಪ್ಲೋಮೆಟ್ ವ್ಹಿಸ್ಕಿ ಬಾಟಲಿಗಳು.
7. 5 ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 750 ಎಂ.ಎಲ್‌ದ 12 ಡೈರೆಕ್ಟರ್ ಸ್ಪೆಶಲ್ ವ್ಹಿಸ್ಕಿ ಬಾಟಲಿಗಳು.
8. 2 ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 750 ಎಂ.ಎಲ್‌ದ 12 ಹೇವರ್ಡ್ಸ್ ಫೈನ್ ವ್ಹಿಸ್ಕಿ ಬಾಟಲಿಗಳು.

ಈ ರೀತಿಯಾಗಿ ಒಟ್ಟು 622.800 ಲೀಟರ್ ಮದ್ಯವನ್ನು ಯಾವುದೇ ಅನುಮತಿ ಪತ್ರವಿಲ್ಲದೇ ಅಕ್ರಮವಾಗಿ ಸಾಗಾಟ ಮಾಡುತ್ತಿದ್ದುದು ಕಂಡು ಬಂದಿದ್ದಾಗಿ ತಿಳಿಸಿದ್ದಾರೆ. ವಾಹನದಲ್ಲಿ ಚಾಲಕ ಮತ್ತು ಇನ್ನೂ ಇಬ್ಬರು ಇದ್ದುದಾಗಿ ತಿಳಿಸಿ ಚಾಲಕನ ಹೆಸರು

ಪಾಂಡುಸಾ ಲಕ್ಷ್ಮಣಸಾ ಹಬೀಬ, ಮತ್ತೊಬ್ಬರ ಹೆಸರು ಜವಾಹರಸಾ ನಾರಾಯಣಸಾ ಭಾಂಡಗೆ ಹಾಗೂ ಇನ್ನೊಬ್ಬನ ಹೆಸರು ಶ್ರೀನಿವಾಸ ಪರಶುರಾಮ ಹಬೀಬ ಎಲ್ಲರೂ ಹುಬ್ಬಳ್ಳಿಯವರಿದ್ದು, ಇವರೆಲ್ಲರನ್ನೂ ದಸ್ತಗಿರಿ ಮಾಡಿದ್ದಾಗಿ ತಿಳಿಸಿದ್ದಾರೆ. ರಟ್ಟಿನ ಪೆಟ್ಟಿಗೆಗಳಿಂದ 750 ಎಂ.ಎಲ್‌ದ 5 ಬಾಟಲಿಗಳನ್ನು, 375 ಎಂಎಲ್‌ದ 2 ಬಾಟಲಿಗಳನ್ನು ಹಾಗೂ 180 ಎಂ.ಎಲ್‌ದ 1 ಬಾಟಲಿಯನ್ನು ಹೀಗೆ 8 ಮದ್ಯದ ಬಾಟಲುಗಳನ್ನು ರಸಾಯನಿಕ ಪರೀಕ್ಷೆಗಾಗಿ ಪ್ರತ್ಯೇಕವಾಗಿ ತೆಗೆದು ಅವುಗಳನ್ನು ಸೀಲು ಮಾಡಿ ತಮ್ಮ ಹಾಗೂ ಪಂಚರ ಸಹಿ ಚೀಟಿಗಳನ್ನು ರಟ್ಟಿನ ಪೆಟ್ಟಿಗೆಗಳಿಗೂ ಹಾಗೂ ಬಾಟಲಿಗಳಿಗೆ ಅಂಟಿಸಿ ಸ್ಥಳದಲ್ಲಿಯೇ ಪಂಚರ ಸಮಕ್ಷಮ ವಿವರವಾದ ಪಂಚನಾಮೆಯನ್ನು ಬರೆದಿದ್ದಾಗಿ ತಿಳಿಸಿದ್ದಾರೆ. ಹಾಗೂ ವಾಹನ ಮತ್ತು ಮದ್ಯದ ಪೆಟ್ಟಿಗೆಗಳನ್ನು ಜಪ್ತಿ ಮಾಡಿದ್ದಾಗಿ ತಿಳಿಸಿದ್ದಾರೆ. ನಂತರ ಬ್ಯಾಟರಿ ಬೆಳಕಿನಲ್ಲಿ ಬೆಳಗಿನ 6.00 ಗಂಟೆಯ ವರೆಗೆ ಪಂಚನಾಮೆ ಬರೆಯಲಾಯಿತೆಂದು ತಿಳಿಸಿದ್ದಾರೆ. ಸದರಿ ಪಂಚನಾಮೆಯ ದೃಢೀಕೃತ ಫೋಟೋ ಪ್ರತಿಯನ್ನು ನಿಪಿ-1 ಹಾಗೂ ಅವರ ಸಹಿಯನ್ನು ನಿಪಿ-1(ಎ) ಎಂದು ಗುರುತಿಸಲಾಗಿದೆ. ಸದರಿ ಜಪ್ತಾದ ವಾಹನವನ್ನು ತಾವು ಗುರುತಿಸುವುದಾಗಿ ತಿಳಿಸಿದರು. ನಂತರ ಆರೋಪಿತರು ಮತ್ತು ಮುದ್ದೆಮಾಲುಗಳೊಂದಿಗೆ ಕಛೇರಿಗೆ ಹಿಂದಿರುಗಿ ಸರಕಾರದ ಪರವಾಗಿ ಫಿರ್ಯಾದಿಯಾಗಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 34, 38(ಎ) ಮತ್ತು 43ರ ಪ್ರಕಾರ ಫಿರ್ಯಾದನ್ನು ಗುನ್ಹೆ ನಂ. 9/94-95ರಲ್ಲಿ ದಾಖಲು ಮಾಡಿದ್ದಾಗಿ ತಿಳಿಸಿದ್ದಾರೆ. ಅದರ ದೃಢೀಕೃತ ಫೋಟೋ ಪ್ರತಿಯನ್ನು ನಿಪಿ-2 ಹಾಗೂ ಅದರ ಮೇಲಿನ ಅವರ ಸಹಿಯನ್ನು ನಿಪಿ-2(ಎ) ಅಂಥ ಗುರುತಿಸಲಾಗಿದೆ. ಅದರೊಂದಿಗೆ ಜಪ್ತಿ ಮಾಡಿದ ವಾಹನ ಮತ್ತು ಮದ್ಯದ ವಿವರಗಳ ದೃಢೀಕೃತ ಪ್ರತಿಯನ್ನು ನಿಪಿ-3 ಹಾಗೂ ಅದರ ಮೇಲಿನ ಅವರ ಸಹಿಯನ್ನು ನಿಪಿ-3(ಎ) ಎಂದು ಗುರುತಿಸಲಾಗಿದೆ. ಪ್ರಥಮ ವರ್ತಮಾನ ವರದಿಯೊಂದಿಗೆ ಫಿರ್ಯಾದನ್ನು ನ್ಯಾಯಾಲಯಕ್ಕೆ ಸಲ್ಲಿಸಿದ್ದಾಗಿ ತಿಳಿಸಿದ್ದಾರೆ. ಅದರ ದೃಢೀಕೃತ ಫೋಟೋ ಪ್ರತಿಯನ್ನು ನಿಪಿ-4 ಹಾಗೂ ಅದರ ಮೇಲಿನ ಅವರ ಸಹಿಯನ್ನು ನಿಪಿ-4 (ಎ) ಎಂದು ಗುರುತಿಸಲಾಗಿದೆ. ಜಪ್ತಾದ ವಸ್ತುಗಳ ಬಗ್ಗೆ ವರದಿಯನ್ನು ಹಾಗೂ ತನಿಖೆ ಮುಗಿಯುವವರೆಗೆ ಜಪ್ತಾದ ಮುದ್ದೆ ಮಾಲನ್ನು ವಶದಲ್ಲಿಟ್ಟುಕೊಳ್ಳಲು ಅಧಿಕೃತ ಅಧಿಕಾರಿಯವರಿಗೆ ಬರೆದು ಅನುಮತಿ ಪಡೆದಿದ್ದಾಗಿ ತಿಳಿಸಿದ್ದಾರೆ. ಅದನ್ನು ನಿಪಿ-5 ಎಂದು ಹಾಗೂ ಅದರ ಮೇಲಿನ ಸಹಿಯನ್ನು ನಿಪಿ-5 (ಎ) ಎಂದು ಗುರುತಿಸಲಾಗಿದೆ. ನಂತರ ಆರೋಪಿಯನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿದ್ದಾಗಿ ತಿಳಿಸಿದ್ದಾರೆ.

ಸದರಿಯವರು ಮುಂದುವರೆದು ಜಪ್ತಾದ ಮದ್ಯದ ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಕಳಿಸಿ ದಿನಾಂಕ:19.11.1994ರಂದು ರಾಸಾಯನಿಕ ಪರೀಕ್ಷೆ ಪ್ರಮಾಣ ಪತ್ರವನ್ನು ಪಡೆದಿದ್ದಾಗಿ ತಿಳಿಸಿದ್ದಾರೆ. ಹಾಗೂ ರಾಸಾಯನಿಕ ಪರೀಕ್ಷೆಯಿಂದ ಮದ್ಯಸಾರದ ಅಂಶ ಇರುವುದಾಗಿ ತಿಳಿಸಿದ್ದಾರೆ. ಅದರ ದೃಢೀಕೃತ ಪ್ರತಿಯನ್ನು ನಿಪಿ-6 ಎಂದು ಹಾಗೂ ಅದರ ಮೇಲಿನ ಅವರ ಸಹಿಯನ್ನು ನಿಪಿ-6(ಎ) ಎಂದು ಗುರುತಿಸಲಾಗಿದೆ. ನಂತರ ದಿನಾಂಕ:28.02.1995 ರಂದು ಅಧಿಕೃತ ಅಧಿಕಾರಿಯವರಿಗೆ ಪತ್ರ ಬರೆದು ಮಾದರಿ ಬಾಟಲಿಗಳನ್ನು ಹೊರತು ಪಡಿಸಿ ಉಳಿದ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜು ಮಾಡಲು ಆದೇಶ ನೀಡಲು ವಿನಂತಿಸಿದ್ದಾಗಿ ತಿಳಿಸಿದರು. ಸದರಿ ಪತ್ರದ ದೃಢೀಕೃತ ಪ್ರತಿಯನ್ನು ನಿಪಿ-7 ಹಾಗೂ ಅದರ ಮೇಲಿನ ಅವರ ಸಹಿಯನ್ನು ನಿಪಿ-7(ಎ) ಎಂದು ಗುರುತಿಸಲಾಗಿದೆ. ವಾಹನ ಮಾಲಿಕರಾದ ಶ್ರೀ ಕಾಶೀನಾಥಸಾ ಖೇಮಸಾ ಖೋಡೆ, ಕಮರಿ ಪೇಟೆ, ಹುಬ್ಬಳ್ಳಿ ಇವರು ತಮ್ಮ ಸ್ವಂತ ಲಾಭಕ್ಕಾಗಿ ಹಾಗೂ ಅವರ ಒಪ್ಪಿಗೆಯಿಂದ ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಟ ನಡೆದಿರುವುದು ಖಚಿತಪಟ್ಟಿರುವುದಾಗಿ ತಿಳಿಸಿ, ಸದರಿ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಿನಂತಿಸಿದ್ದಾರೆ. ಆರೋಪಿತರ ವಿರುದ್ಧ ದಿನಾಂಕ:03.07.1995 ರಂದು ದೋಷಾರೋಪಣಾ ಪತ್ರ ಸಲ್ಲಿಸಿದ್ದಾಗಿ ತಿಳಿಸಿದ್ದಾರೆ. ಅದರ ಕಾರ್ಬನ್ ಪ್ರತಿಯನ್ನು ನಿಪಿ-8 ಎಂತಲೂ ಹಾಗೂ ಅದರ ಮೇಲಿನ ಅವರ ಸಹಿಯನ್ನು ನಿಪಿ-8(ಎ) ಎಂದು ಗುರುತಿಸಲಾಗಿದೆ. ಸದರಿಯವರು ವಯೋ ನಿವೃತ್ತಿ ಹೊಂದಿರುವುದರಿಂದ ದಿನಾಂಕ:31.07.1998ರಂದು ಸದರಿ ಪ್ರಕರಣದ ಕಡತವನ್ನು ಶ್ರೀ ಪಿ.ಎಸ್. ಶ್ರೀಖಂಡೆ, ಅಬಕಾರಿ ಇನ್ಸ್‌ಪೆಕ್ಟರ್, ಇಐಬಿ, ಬೆಳಗಾಂವ ಇವರಿಗೆ ವಹಿಸಿಕೊಟ್ಟಿದ್ದಾಗಿ ತಿಳಿಸಿದ್ದಾರೆ. ವಾಹನ ಮಾಲಿಕರು ಅಥವಾ ಅವರ ಪರ ವಕೀಲರು ಹಾಜರಿಲ್ಲದ್ದರಿಂದ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಯಿತು.

ಪ್ರಾ.ಸಾ-2 ರಾದ ಶ್ರೀ ಮಾಣಿಕ ವಾಸುದೇವ ಶೆಟ್ಟಿ ಇವರು ಪಂಚ ಸಾಕ್ಷಿದಾರರಿದ್ದು, ಸದರಿಯವರು ಈ ಪ್ರಾಧಿಕಾರದ ಮುಂದೆ ದಿನಾಂಕ:13.02.2003 ರಂದು ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡುತ್ತ ದಿನಾಂಕ:22.09.1994ರಂದು ನಸುಕಿನ 2:00 ಗಂಟೆಗೆ ಫಿರ್ಯಾದಿಯವರು ಅವರಿಗೆ ಕರೆಸಿದ್ದಾಗಿ ತಿಳಿಸಿದ್ದಾರೆ. ಅವರ ಜೊತೆಗೆ ಶ್ರೀ ಪಾಂಡುರಂಗ ಶೆಟ್ಟೆಪ್ಪ ಕದಮ್ ಈತನು ಪಂಚನಾಗಿ ಬಂದಿದ್ದಾಗಿ ತಿಳಿಸಿ ಸದರಿಯವರು ಈಗ ಮೃತರಾಗಿರುವುದಾಗಿ ತಿಳಿಸಿದ್ದಾರೆ. ಸದರಿ ದಿನದಂದು ಅವರು ಫಿರ್ಯಾದಿಯವರೊಂದಿಗೆ ಹಾಗೂ ಇಲಾಖಾ ಸಿಬ್ಬಂದಿಯವರೊಂದಿಗೆ ಹಲಗಾ ಗ್ರಾಮದ ಹತ್ತಿರ ಹೋಗಿದ್ದಾಗಿ ತಿಳಿಸಿದ್ದಾರೆ. ನಂತರ ನಸುಕಿನ 5:00 ಗಂಟೆಯ ಸುಮಾರಿಗೆ ಹುಬ್ಬಳ್ಳಿ ಕಡೆಯಿಂದ ಬೆಳಗಾಂವಿಯ ಕಡೆಗೆ ಒಂದು ಹಸಿರು ಬಣ್ಣದ ಮೆಟಡೋರ್ ವಾಹನ ಸಂ. ಕೆಎ-25-4445 ನೇದ್ದು ಬರುತ್ತಿದ್ದಾಗ ಅದನ್ನು ನಿಲ್ಲಿಸಿ ನೋಡಲಾಗಿ ಅದರಲ್ಲಿ ಚಾಲಕ ಹಾಗೂ ಇನ್ನೂ ಇಬ್ಬರು ಇದ್ದುದಾಗಿ ತಿಳಿಸಿದ್ದಾರೆ. ವಾಹನದಲ್ಲಿ 70 ರಟ್ಟಿನ ಪೆಟ್ಟಿಗೆಗಳು ಇದ್ದು ಅವುಗಳನ್ನು ಪರಿಶೀಲಿಸಿ ಅವುಗಳಲ್ಲಿ ಬೇರೆ ಬೇರೆ ನಮೂನೆಯ ಮದ್ಯದ ಬಾಟ್ಲಿಗಳು ಇದ್ದು ಅವುಗಳನ್ನು ಸಾಗಾಟ ಮಾಡಲು ಸರಕಾರದ ಅನುಮತಿ ಪತ್ರ ವಾಹನದಲ್ಲಿದ್ದವರ ಹತ್ತಿರ ಇರಲಿಲ್ಲ ಎಂದು ತಿಳಿಸಿದ್ದಾರೆ. ಅವರ ಹೆಸರು ಕೇಳಲಾಗಿ, ಚಾಲಕನ ಹೆಸರು ಪಾಂಡುಸಾ ಲಕ್ಷ್ಮಣಸಾ ಹಬೀಬ ಇನ್ನೊಬ್ಬನ ಹೆಸರು ಜವಾಹರಸಾ ನಾರಾಯಣಸಾ ಹಬೀಬ ಹಾಗೂ ಮೂರನೆಯವನ ಹೆಸರು ಶ್ರೀನಿವಾಸ ಪರಶುರಾಮಸಾ ಹಬೀಬ ಎಲ್ಲರೂ ಹುಬ್ಬಳ್ಳಿಯವರು ಎಂದು ಹೇಳಿದ್ದಾಗಿ ತಿಳಿಸಿದ್ದಾರೆ. ಸದರಿ ವಾಹನದಲ್ಲಿ ಮದ್ಯವನ್ನು ಅಕ್ರಮವಾಗಿ ಸಾಗಾಟ ಮಾಡುತ್ತಿದ್ದುದು ಖಚಿತವಾಗಿದ್ದರಿಂದ ಫಿರ್ಯಾದಿಯವರು ವಾಹನ ಮತ್ತು ಮದ್ಯದ ಪೆಟ್ಟಿಗೆಗಳನ್ನು ಜಪ್ತಿ ಮಾಡಿದ್ದಾಗಿ ತಿಳಿಸಿದ್ದಾರೆ. ಹಾಗೂ ಒಟ್ಟು 8 ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು ಸೀಲು ಮಾಡಿ ಫಿರ್ಯಾದಿಯವರ ಹಾಗೂ ಸದರಿಯವರ ಸಹಿ ಚೀಟಿ ಅಂಟಿಸಿದ್ದಾಗಿ ತಿಳಿಸಿದ್ದಾರೆ. ರಟ್ಟಿನ ಪೆಟ್ಟಿಗೆಗಳ ಮೇಲೂ ಸಹ ಚೀಟಿಗಳನ್ನು ಅಂಟಿಸಿದ್ದಾಗಿ ತಿಳಿಸಿದ್ದಾರೆ. ಈ ಬಗ್ಗೆ ಬೆಳಗಿನ 6:00 ಗಂಟೆಯ ವರೆಗೆ ಬ್ಯಾಟರಿ ಬೆಳಕಿನಲ್ಲಿ ಪಂಚನಾಮೆಯನ್ನು ಬರೆದು ಸದರಿಯವರ ಸಹಿ ಪಡೆದಿದ್ದಾಗಿ ತಿಳಿಸಿದ್ದಾರೆ.

ಪಂಚನಾಮೆಯ ದೃಢೀಕೃತ ಫೋಟೋ ಪ್ರತಿ ನಿಪಿ-1ನ್ನು ಗುರುತಿಸಿದ್ದಾಗಿ ತಿಳಿಸಿದ್ದಾರೆ. ವಾಹನವನ್ನು ನೋಡಿದರೆ ಅದನ್ನು ಗುರುತಿಸುವುದಾಗಿ ಹೇಳಿದ್ದಾರೆ. ವಾಹನ ಮಾಲಿಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಹಾಜರಿಲ್ಲದಿರುವುದರಿಂದ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಯಿತು.

ಪ್ರಾ.ಸಾ-1 ಹಾಗೂ ಪ್ರಾ.ಸಾ-2 ಇವರ ಹೇಳಿಕೆಯ ಮೇರೆಗೆ ದಿನಾಂಕ:22.09.1994 ರಂದು ವಾಹನ ಸಂ.ಕೆಎ.-25-4445ರಲ್ಲಿ ಅಕ್ರಮ ಮದ್ಯ ಸಾಗಾಣಿಕೆ ಆಗಿರುವುದು ಪ್ರಾಧಿಕಾರಕ್ಕೆ ಮನವರಿಕೆ ಆಗಿರುವುದರಿಂದ 3ನೇ ಪ್ರಶ್ನೆಯನ್ನು ಗುಣಾತ್ಮಕವಾಗಿ ತೀರ್ಮಾನಿಸಲಾಗಿದೆ. ಸದರಿ ಅಪರಾಧವು ತಮ್ಮ ತಿಳುವಳಿಕೆಗೆ ಬಾರದಂತೆ ನಡೆದಿತ್ತು ಎಂದು ಸಿದ್ಧಪಡಿಸುವ ಜವಾಬ್ದಾರಿ ವಾಹನ ಮಾಲಿಕರದ್ದು ಇರುತ್ತದೆ. ಆದರೆ ಈ ಗುನ್ನೆಯಲ್ಲಿ ವಾಹನ ಮಾಲಿಕರ ಪರವಾಗಿ ಅವರ ವಕೀಲರು ದಿನಾಂಕ:03.07.1995 ಹಾಗೂ 27.06.1996ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಅರ್ಜಿಯನ್ನು ಸಲ್ಲಿಸಿದ್ದನ್ನು ಬಿಟ್ಟರೆ ಈ ಪ್ರಾಧಿಕಾರದ ಯಾವುದೇ ನಡಾವಳಿಯಲ್ಲಿ ಹಾಜರಾಗಿರುವುದಿಲ್ಲ. ಆದ್ದರಿಂದ ವಾಹನ ಮಾಲಿಕರಾಗಲೀ ಅಥವಾ ಅವರ ವಕೀಲರಾಗಲೀ ಯಾವುದೇ ಉತ್ಸಾಹ ಇಲ್ಲದ್ದು ಕಂಡು ಬರುತ್ತದೆ. ಅವರು ತಮ್ಮ ತಿಳುವಳಿಕೆಗೆ ಬಾರದಂತೆ ಈ ಘಟನೆ ನಡೆದಿದೆ ಎಂದು ಈ ಪ್ರಾಧಿಕಾರದ ಮುಂದೆ ಸಿದ್ಧಪಡಿಸುವಲ್ಲಿ ವಿಫಲರಾಗಿರುತ್ತಾರೆ. ಆದ್ದರಿಂದ ಎರಡನೆಯ ಪ್ರಶ್ನೆಗೆ ಉತ್ತರ ಇಲ್ಲವೆಂದು ಪರಿಗಣಿಸಲಾಗಿದೆ.

ಈ ಎಲ್ಲ ಕಾರಣಗಳಿಂದ ಈ ಪ್ರಕರಣದಲ್ಲಿ ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಶ್ರೀ ಪಿ.ಎನ್. ಮುರಗೋಡ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ರ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಇ.ಐ.ಬಿ., ಬೆಳಗಾಂವ ಇವರು ದಾಖಲು ಮಾಡಿದ ಗುನ್ನೆ ನಂ. 9/94-95 ದಿನಾಂಕ: 22.09.1994ನೇದ್ದರಲ್ಲಿ ಜಪ್ತಾದ ವಾಹನ ಮೆಟಡೋರ್ ನಂ. ಕೆಎ-25-4445 ಮತ್ತು 70 ಪೆಟ್ಟಿಗೆ ಮದ್ಯವನ್ನು (ಸ್ಯಾಂಪಲ್ ಹೊರತುಪಡಿಸಿ) ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವನ್ನು ಇಂದು ದಿನಾಂಕ:26.12.2003 ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಮುದ್ರಣ ಮಾಡಿಸಿ ಪ್ರತಿಯನ್ನು ತಿದ್ದಿ ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

**ಪಿ.ಎನ್. ಮುರಗೋಡ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಬೆಳಗಾಂವ ಜಿಲ್ಲೆ, ಬೆಳಗಾಂವ.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

| | | |
|---|---|---|
| ಪ್ರಾ.ಸಾ 1 | ಶ್ರೀ ಪವಾಡೆಪ್ಪಾ ದುಂಡಪ್ಪಾ ಬೊಮ್ಮನಾಯಕ, ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಇ.ಐ.ಬಿ. ಬೆಳಗಾಂವ | ಫಿರ್ಯಾದಿ. |
| ಪ್ರಾ.ಸಾ. 2 | ಶ್ರೀ ಮಾಣಿಕ ವಾಸುದೇವ ಶೆಟ್ಟಿ | ಪಂಚ |

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

| | |
|---|---|
| ನಿಶಾನೆ ಪಿ-1 | - ಪಂಚನಾಮೆಯ ಫೋಟೋ ಪ್ರತಿ. |
| ನಿಶಾನೆ ಪಿ-1ಎ | - ಅದರ ಮೇಲಿನ ಅವರ ಸಹಿ. |
| ನಿಶಾನೆ ಪಿ-2 | - ಸರ್ಕಾರದ ತರ್ಫೆ ಫಿರ್ಯಾದಿನ ಫೋಟೋ ಪ್ರತಿ. |
| ನಿಶಾನೆ ಪಿ-2ಎ | - ಅದರ ಮೇಲಿನ ಅವರ ಸಹಿ. |
| ನಿಶಾನೆ ಪಿ-3 | - ಜಪ್ತಾದ ಮುದ್ದೆ ಮಾಲಿನ ವಿವರ ಪಟ್ಟಿ. |
| ನಿಶಾನೆ ಪಿ-3ಎ | - ಅದರ ಮೇಲಿನ ಅವರ ಸಹಿ. |
| ನಿಶಾನೆ ಪಿ-4 | - ಪ್ರಥಮ ವರ್ತಮಾನ ವರದಿಯ ಫೋಟೋ ಪ್ರತಿ. |
| ನಿಶಾನೆ ಪಿ-4ಎ | - ಅದರ ಮೇಲಿನ ಅವರ ಸಹಿ. |
| ನಿಶಾನೆ ಪಿ-5 | - ಜಪ್ತಾದ ಮುದ್ದೆ ಮಾಲನ್ನು ತಾಬಾದಲ್ಲಿ ಇಟ್ಟುಕೊಳ್ಳಲು ಬರೆದ ಅನುಮತಿ ಪತ್ರ. |
| ನಿಶಾನೆ ಪಿ-5ಎ | - ಅದರ ಮೇಲಿನ ಅವರ ಸಹಿ. |
| ನಿಶಾನೆ ಪಿ-6 | - ರಾಸಾಯನಿಕ ಪರೀಕ್ಷೆ ಪ್ರಮಾಣ ಪತ್ರ. |
| ನಿಶಾನೆ ಪಿ-6ಎ | - ಅದರ ಮೇಲಿನ ಅವರ ಸಹಿ. |
| ನಿಶಾನೆ ಪಿ-7 | - ಜಪ್ತಾದ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಬರೆದ ಪತ್ರ. |
| ನಿಶಾನೆ ಪಿ-7ಎ | - ಅದರ ಮೇಲಿನ ಅವರ ಸಹಿ. |
| ನಿಶಾನೆ ಪಿ-8 | - ಜಾರ್ಜ್ ಶೀಟ್ ಪ್ರತಿ. |

ನಿಶಾನೆ ಪಿ-8ಎ - ಅದರ ಮೇಲಿನ ಅವರ ಸಹಿ.

**ಅನುಬಂಧ-3**

ವಾಹನ ಮಾಲಿಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು -ಇಲ್ಲಾ

**ಅನುಬಂಧ-4**

ವಾಹನ ಮಾಲಿಕರ ಪರವಾಗಿ ಗುರುತಿಸಲಾದ ದಾಖಲೆಗಳು -ಇಲ್ಲಾ

**ಪಿ.ಎನ್. ಮುರಗೋಡ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಬೆಳಗಾಂವ ಜಿಲ್ಲೆ, ಬೆಳಗಾಂವ.

ಪಿ.ಆರ್.123

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ದಾವಣಗೆರೆ ವಿಭಾಗ, ದಾವಣಗೆರೆ ಇವರ ನ್ಯಾಯಾಲಯ**

**ಸಂಖ್ಯೆ: ಎ2:ಅಮೊಸಂ:36:ಸಿಆರ್ 21/03-04, ದಿನಾಂಕ:16ನೇ ಜನವರಿ, 2004**

ದಾವಣಗೆರೆ ಅರಣ್ಯ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನವನ್ನು ದಾವಣಗೆರೆ ಅರಣ್ಯ ವಿಭಾಗದ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ಪ್ರಕಾರ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ. ಈ ನ್ಯಾಯಾಲಯಕ್ಕೆ ಹಾಜರು ಪಡಿಸಲಾದ ವಾಹನದ ವಿವರ ಈ ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನದ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ವಾಹನದ ಸಂಖ್ಯೆ | ಎಂಜಿನ್ ಸಂಖ್ಯೆ | ಚಾಸ್ಸಿಸ್ ಸಂಖ್ಯೆ |
|---|---|---|---|---|---|
| 1. | ಮಾರುತಿ ಕಾರು | 36/2003 | ಕೆಎ-18 ಎಂ-636 ಕೆಎ-14 ಎಂ-2477 (ಕಾರಿನ ಹಿಂಭಾಗದ ಸೀಟಿನ ಕವರಿನ ಒಳಗೆ ಇದ್ದ ಮತ್ತೊಂದು ಸಂಖ್ಯೆ) | F 8 B I N 790876 | SB 308 I N 534316 |

ಮೇಲೆ ತೋರಿಸಿರುವ ವಾಹನದ ಬಗ್ಗೆ ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನದ ಬಗ್ಗೆ ಅಧಿಕೃತ ಹಕ್ಕು ಭಾದ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರು ಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ, ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರು ಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲಿನ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71 (ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಬಿ. ಗೋಪಾಲನಾಯ್ಕ್**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ
ದಾವಣಗೆರೆ ವಿಭಾಗ, ದಾವಣಗೆರೆ.

ಪಿ.ಆರ್. 124

**RAJIV GANDHI UNIVERSITY OF HEALTH SCIENCES, KARNATAKA**

**4TH 'T' BLOCK, JAYANAGAR, BANGALORE-560 041**

**NOTIFICATION**

**No. ACA/SYN/STAT/47/2002-03, Dated:19th August, 2003**

**Sub:** Statutes of the Rajiv Gandhi University of Health Sciences, Karnataka, Bangalore.

**Ref:** 1. Government letter No. HFW 41 RGU 2003, dated:18.07.2003.
2. Government letter No. HFW 42 RGU 2003, dated: 18.07.2003.

In exercise of the powers conferred under section 34(3) of RGUHS Act, 1994 the Vice-Chancellor has been please to notify the following statutes as given in the schedule I & II here to annexed.

(1) Statutes relating to preparation and submission of Annual reports by the RGUHS to the Government.

(2) Statutes relating to withdrawal of Degrees, Diplomas, Certificates and other Academic distinctions by the RGUHS.

The statutes as above have received the assent of the Chancellor vide Government letters cited in reference above.

By Order,
REGISTRAR
Rajiv Gandhi University of Health Sciences,
Bangalore-560041

**RAJIV GANDHI UNIVERSITY OF HEALTH SCIENCES, KARNATAKA 4TH 'T' BLOCK, JAYANAGAR, BANGALORE-560 041**

**Schedule I Annexure to University Notification No. ACA/SYN/STT/47/2002-03, dated: 19.08.2003**

(5) STATUTES RELATING TO PREPARATION AND SUBMISSION OF ANNUAL REPORT BY THE RAJIV GANDHI UNIVERSITY HEALTH SCIENCES TO THE GOVERNMENT

(Framed under Section 44 read with Section 23(2) (iii) of the RGUHS Act, 1994)

**1. TITLE AND COMMENCEMENT:**

i) These Statutes shall be called as 'STATUTES RELATING TO PREPARATION AND SUBMISSION OF ANNUAL REPORT BY THE RAJIV GANDHI UNIVERSITY OF HEALTH SCIENCES TO THE GOVERNMENT;

ii) They shall come into force with effect from the date of their publication in the official gazette, after obtaining the assent of the Chancellor.

**2. FORM AND CONTENTS OF SUCH ANNUAL REPORT:**

The Annual Report shall be got prepared by the Syndicate in the format given here below furnishing the details of functions and activities of the University:

**I** (i) Introduction of University
(ii) Objectives
(iii) Organizational set up (authorities of the University)

**II ACTIVITIES**

(i) Number of colleges affiliated faculty wise.
(ii) Intake of colleges-course wise.
(iii) Major landmarks, new courses added, resource facilities enhanced, and new colleges sanctioned.
(iv) Research activities, research studies surveys entrusted by AIU, if any.
(v) Important decisions of the Authorities.

**III ACHIEVEMENT**

(i) Admissions course wise, college wise, faculty wise.
(ii) Workshops, symposiums and other important events.
(iii) Endowments instituted.
(iv) Co-operations, collaborations, MOU of RGUHS with National and International Academic Institutions having common objectives as that of RGUHS., Accreditations, linkages with institutions abroad, if any.
(v) Fellowship Programmes.
(vi) Functions/ activities relating to Social responsibility of University to the Society.
(vii) Statutes Ordinances made or issued.

**IV EXAMINATIONS CONDUCTED:**

(i) Details of examinations conducted faculty wise with number of students appeared.
(ii) Convocation distinctions if any, including gold medals awarded.
(iii) Analysis of sex wise Statistics relating to SC/ ST and weaker sections indicating their performance.

**V FINANCE**

(i) Statement of receipts and expenditure.
(ii) Plan for stream lining funds.
(iii) Revenue generated, if any,
(iv) Govt. grants, Grants of the UGC or Grants from any other organizations.

**VI STAFF POSITION**

**VII DEVELOPMENTAL PLANS**

(i) Constructions, civil works, extension, repairs and maintenance.
(ii) New Centers.
(iii) Assets procured-land, building, equipment, computers, vehicles etc.,
(iv) Investments/ fixed deposits.

**3. SCHEDULES FOR PREPARATION AND SUBMISSION OF ANNUAL REPORT**

1) The Annual Report of the year shall be prepared and placed before the Syndicate by the 31st July.
2) The Syndicate after scrutiny shall place the report approved by it before the Senate by the end of August.
3) The Senate after scrutiny of such annual report, pass resolution thereon.
4) The Syndicate shall thereafter take necessary action in accordance with such resolution.
5) Action taken by the Syndicate shall then be intimated to the Senate at the next Ordinary Meeting of the Senate.
6) Sufficient copies of Annual Report along with the resolution of the Senate and the action taken thereon by the Syndicate shall be submitted to the Government by 30th September every year.

**RAJIV GANDHI UNIVERSITY OF HEALTH SCIENCES, KARNATAKA**
**4TH 'T' BLOCK, JAYANAGAR, BANGALORE-560 041**

**Schedule II Annexure to University Notification No. ACA/SYN/STT/47/2002-03, dated:19.08.2003**

(6) STATUTES RELATING TO WITHDRAWAL OF DEGREES, DIPLOMAS, CERTIFICATES AND OTHER ACADEMIC DISTINCTIONS BY THE RGUHS

(Framed under Section 33(1)(e) read with Section 23(2) (iii) of the RGUHS Act, 1994)

**1. TITLE AND COMMENCEMENT:**

i) These Statutes shall be called as 'STATUTES RELATING TO WITHDRAWAL OF DEGREES, DIPLOMAS, CERTIFICATES AND OTHER ACADEMIC DISTINCTIONS BY THE RGUHS.

They shall come into force with effect from the date of their publication, after obtaining the assent of the Chancellor.

**2. WITHDRAWAL OF DEGREES, DIPLOMAS:**

i) The Senate may, on the recommendation of the Syndicate, withdraw any distinction, degree, diploma, certificate or privilege conferred or granted to any person, by a resolution passed by the majority of the total members of the Senate and by a majority of not less than two-thirds of the members of the Senate present and voting at the meeting, if such person has been found to have been convicted by a Court of Law for an offence, with in the opinion of the Senate, involves moral turpitude or if he has been guilty of gross misconduct or it he has been found to have obtained such a degree, or diploma or certificate fraudulently or has obtained admission through a false caste certificate.
ii) No action, under these Statutes, shall be taken against any person unless he has been given an opportunity to show cause against the action proposed to be taken.
iii) A copy of the resolution passed by the Senate shall be immediately sent to the person concerned.
iv) Any person aggrieved by the decision taken by the Senate may appeal to the Chancellor, within thirty days from the date of receipt of such resolution.
v) The decision of the Chancellor on such appeal shall be final.

By Order,
REGISTRAR
Rajiv Gandhi University of Health Sciences,
Bangalore-560041

PD-7

**ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ ಸಿದ್ದಾಪುರ**

**ಅಧಿಸೂಚನೆ**

**ಸಂಖ್ಯೆ:ತಾಸಕಅ:ಸಿಬ್ಬಂದಿ ಎಸ್-1: ಸಿಆರ್:81:2003-04, ದಿನಾಂಕ:19ನೇ ನವೆಂಬರ್, 2003**

**ವಿಷಯ:** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ-56 ಯೋಜಮಸ-02 (1) ದಿನಾಂಕ:18.07.2002.

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ, 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಿಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ತಾಲ್ಲೂಕು ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| ತಾಲ್ಲೂಕು ಮಟ್ಟದಲ್ಲಿ | ಕಛೇರಿ ಅಧೀಕ್ಷಕರು | ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ ಈ ಕೆಳಗೆ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

1) ಇಲಾಖೆಯ ಸಂಘಟನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯು ತಾಲ್ಲೂಕು ಪಂಚಾಯತ್‌ನ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಸದರಿ ಕಛೇರಿಯಲ್ಲಿ ಈ ಕೆಳಗಿನಂತೆ ಪೂರಕ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

| | | |
|---|---|---|
| 1) | ಕಛೇರಿ ಅಧೀಕ್ಷಕರು | 1 ಹುದ್ದೆ |
| 2) | ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 3) | ದ್ವಿತೀಯ ದರ್ಜೆ ಸಹಾಯಕರು | 1 ಹುದ್ದೆ |
| 4) | ಬೆರಳಚ್ಚುಗಾರರು | 1 ಹುದ್ದೆ |
| 5) | ಗ್ರೂಪ್ "ಡಿ" ನೌಕರರು | 1 ಹುದ್ದೆ |

1) ಸಾರ್ವಜನಿಕ ಗಂಡು ಮಕ್ಕಳ ವಸತಿನಿಲಯ ಕೊಂಡ್ಲಿ, ಸಿದ್ದಾಪುರ (ಉ.ಕ)
2) ಸಾರ್ವಜನಿಕ ಗಂಡು ಮಕ್ಕಳ ವಸತಿ ನಿಲಯ ಕಾನಗೋಡ, ಸಿದ್ದಾಪುರ (ಉ.ಕ)
3) ಸಾರ್ವಜನಿಕ ಹೆಣ್ಣು ಮಕ್ಕಳ ವಸತಿ ನಿಲಯ ಕೊಂಡ್ಲಿ, ಸಿದ್ದಾಪುರ (ಉ.ಕ.)
4) ಸರ್ಕಾರಿ ವಸತಿ ಶಾಲೆ ಕೊಂಡ್ಲಿ, ಸಿದ್ದಾಪುರ (ಉ.ಕ.)

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಪ.ಜಾ.:ಪ. ವರ್ಗಗಳ ಸರ್ವತೋಮುಖ ಅಭಿವೃದ್ದಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1) ಕಟ್ಟಡಗಳ ನಿರ್ವಹಣೆ.
2) ರಾಜ್ಯ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಶಿಷ್ಯ ವೇತನ.
3) ಎಸ್.ಎಸ್.ಎಲ್.ಸಿ. ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ
4) ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ
5) ಪ್ರತಿಭಾ ವಿದ್ಯಾರ್ಥಿ ವೇತನ.
6) ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳು
7) ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ
8) ಪ. ವರ್ಗದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ (ಸಿ.ಎಸ್.ಎಸ್)
9) ಅನೈರ್ಮಲ್ಯ ವೃತ್ತಿಗಳಲ್ಲಿ ತೊಡಗಿರುವ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ
10) 1 ರಿಂದ 4ನೇ ತರಗತಿಯ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ
11) ಪ. ಜಾತಿಯವರ ಮನೆಗಳಿಗೆ ವಿದ್ಯುತ್ ಪೂರೈಕೆ
12) ಅಸ್ಪೃಶ್ಯತಾ ನಿವಾರಣೆ
13) ದೌರ್ಜನ್ಯಕ್ಕೆ ಒಳಪಟ್ಟ ಪ. ಜಾತಿಯವರಿಗೆ ಪರಿಹಾರ
14) ಜಾತಿ ಪರಿಶೀಲನೆ.
15) ವಿಶೇಷ ಘಟಕ ಯೋಜನೆಯ ಕಾರ್ಯಕ್ರಮ ಅನುಷ್ಠಾನ
16) ಗಿರಿಜನ ಉಪಯೋಜನೆಯ ಕಾರ್ಯಕ್ರಮಗಳ ಅನುಷ್ಠಾನ

2. ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:

ಮೇಲೆ ವಿವರಿಸಿರುವಂತೆ ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕು ಮಟ್ಟದಲ್ಲಿ ಸಂಬಂಧಿಸಿದ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಹಣಾ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು:**

ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು: ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ನಿರ್ವಹಿಸುವ ಪ್ರತಿಯೊಂದು ಕರ್ತವ್ಯಗಳ ಬಗ್ಗೆ ಇಲ್ಲಿ ಅಂಶವಾರು ಮಾಹಿತಿ ನೀಡುವುದು ಜಾಬ್ ಚಾರ್ಟ್ ಪ್ರತಿ ಲಗತ್ತಿಸಿದೆ.

3. ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಗಳ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ಆಯಾ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯನಿರ್ವಹಿಸುವರು. ಸಾರ್ವಜನಿಕರಿಂದ ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರುಸಹಿ ಮಾಡಿಸಿದ ನಂತರ ಸದರಿ ಪತ್ರಗಳನ್ನು ನೊಂದಾಯಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ, ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

3. ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:

1) ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೊಂದಾಯಿಸಿ ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2) ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.
3) ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕರ ಮೇಜು ತಪಾಸಣಾ ಕಾರ್ಯ.
4) ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.
5) ಸರ್ಕಾರವು: ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು.
6) ಸಾರ್ವಜನಿಕ ಕುಂದು ಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

4. ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:

1) ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು, ಆದೇಶಗಳು ವಾರ್ಷಿಕ ಸಂಕಲನ ಕ್ರಿಯಾ ಯೋಜನೆ ಹಾಗೂ ಕಿರುಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.
2) ಸಾರ್ವಜನಿಕ ಕುಂದು ಕೊರತೆಗಳಿಗೆ ಸಂಬಂಧಿಸಿದಂತೆ, ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿರುವುದು.
3) ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರೀತ್ಯಾ ರಾಜ್ಯ ಮಟ್ಟದಲ್ಲಿ, ಜಂಟಿ ನಿರ್ದೇಶಕರು (ವಿ.ಘ.ಯೋ)ಯವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜ ಕಲ್ಯಾಣ ಆಯುಕ್ತರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ, ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರವನ್ನಾಗಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್‌ರವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿಯೂ ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.
4) ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂತಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ
ಸಿದ್ದಾಪುರ (ಉ.ಕ.)

ಪಿ.ಆರ್.131

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರರವರ ನ್ಯಾಯಾಲಯದಲ್ಲಿ**

**ನಂ. ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/199/99.2000, ದಿನಾಂಕ:16ನೇ ಜನವರಿ, 2004**

**ಉಪಸ್ಥಿತರು:** ಶ್ರೀ ಎಸ್.ಎಸ್. ವಡಕಣ್ಣವರ
ಪ್ರಭಾರಿ ಅಧೀಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದಿ:** ಶ್ರೀ ಎಸ್.ಎಸ್. ಖತೀಬ್
ಅಬಕಾರಿ ಉಪ ಅಧೀಕ್ಷಕರು (ಪ್ರಭಾರಿ) ಮಾಜಾಳಿ ಚೆಕ್ ಪೋಸ್ಟ್ (ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು ಕಾರವಾರ ರವರ ಪ್ರತಿನಿಧಿಸಿರುವರು)

**ವಿರುದ್ಧ**

**ಅರ್ಜಿದಾರರು:** ಎಂ.ಪಿ. ಅಬ್ದುಲ್ಲಾಕುಟ್ಟಿ
ತಂದೆ ಮಾಯಮಮ್
ಸಾ: ಮನಿಯಾಧಿಪುರಥ ಹೌಸ್, ಆಲನಕೋಡ ಕೇರಳ ರಾಜ್ಯ.
(ಶ್ರೀ ಆರ್.ವಿ. ಭಟ್ ವಕೀಲರು ಕಾರವಾರ ರವರ ಪ್ರತಿನಿಧಿಸಿರುವರು)

**ತೀರ್ಪು**

ಈ ಆರೋಪವನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32,33 ಹಾಗೂ 34, 38ಎ ರಂತೆ ಹೊರಿಸಲಾಗಿದ್ದು, ಜಪ್ತಿಯಾದ ವಾಹನ ಮತ್ತು ಇತರೇ ಸ್ವತ್ತುಗಳನ್ನು ಸರ್ಕಾರಕ್ಕೆ ಕಲಂ 43ಎ (2) ರಂತೆ ಮುಟ್ಟುಗೋಲು ಹಾಕಿಕೊಳ್ಳಲು ಸಲ್ಲಿಸಿದ ಪ್ರಸ್ತಾವನೆಯಾಗಿರುತ್ತದೆ.

1. ದಿನಾಂಕ:17.02.2000 ರಂದು ಈ ಪ್ರಕರಣದ ಫಿರ್ಯಾದುದಾರರು ಮಾಜಾಳಿ ತನಿಖಾ ಠಾಣೆಯಲ್ಲಿ ವಾಹನ ತಪಾಸಣಾ ಕಾರ್ಯದಲ್ಲಿ ನಿರತರಾಗಿದ್ದಾಗ ರಾತ್ರಿ 2-45 ಗಂಟೆಯ ಸಮಯಕ್ಕೆ ಗೋವಾ ರಾಜ್ಯದಗಡಿಯಿಂದ ಅಬಕಾರಿ ತನಿಖಾ ಠಾಣೆಯ ಕಡೆಗೆ ಬಂದಂತಹ ಟೆಂಪೊ ಸಂಖ್ಯೆ:ಕೆಡಿಇ-7729 ನೇದನ್ನು ನಿಲ್ಲಿಸಿ, ಸಂಶಯದಿಂದ ವಾಹನವನ್ನು ಸಿಬ್ಬಂದಿಗಳು ಶೋಧನೆ ಮಾಡುತ್ತಿದ್ದಂತೆ ವಾಹನದ ಚಾಲಕನು ಓಡಿ ಹೋಗಿದ್ದರಿಂದ, ವಾಹನದಲ್ಲಿ ಅಕ್ರಮವಸ್ತುಗಳು ಇವೆಯೆಂಬುದಾಗಿ ಸಂಶಯವನ್ನು ಖಾತ್ರಿ ಮಾಡಿಕೊಂಡು ವಾಹನವನ್ನು ಪಂಚರ ಸಮಕ್ಷಮ ಶೋಧನೆಗೈದಾಗ, ವಾಹನದ ಬಾಡಿಗೆ ಸಮಾನಾಂತರವಾಗಿ ಹಸಿ ಮೀನು ಹರಡಿಸಿದ್ದು, ಅವುಗಳ ಮೇಲೆ ಮಂಜುಗಡ್ಡೆಯ ಚೂರುಗಳು ಸಹ ಹರಡಿದ್ದು ಇವುಗಳ ಕೆಳಗಡೆ ಮದ್ಯದ ಸೀಸೆಗಳಿದ್ದ ರಟ್ಟಿನ ಪೆಟ್ಟಿಗೆಗಳು ಹಾಗೂ ಪ್ಲಾಸ್ಟಿಕ್ ಕ್ಯಾನುಗಳು ಇರುವುದು ಕಂಡು ಬಂದು ಇವುಗಳನ್ನು ಪರಿಶೀಲಿಸಿ ನೋಡಲಾಗಿ ಒಟ್ಟು 78 ರಟ್ಟಿನ ಪೆಟ್ಟಿಗೆಗಳು ಹಾಗೂ 39 ಪ್ಲಾಸ್ಟಿಕ್ ಕ್ಯಾನುಗಳು ಇರುವುದು ಕಂಡು ಬಂದಿದ್ದರಿಂದ 78 ಮದ್ಯದ ಪೆಟ್ಟಿಗೆಗಳ ಪೈಕಿ 66 ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 180 ಮಿ.ಲೀ.ನ ತಲಾ 48 ಸೀಸೆಗಳಂತೆ ಒಟ್ಟು 3168 ಬ್ರಿಗೇಡಿಯರ್ ರಂ ಎಂಬ ಮದ್ಯದ ಸೀಸೆಗಳು ಇದ್ದು, ಇವು ಗೋವಾ ರಾಜ್ಯದಲ್ಲಿ ತಯಾರಾಗಿದ್ದು ಕೇರಳ ರಾಜ್ಯದಲ್ಲಿ ಮಾರಾಟಕ್ಕೆ ಮಾತ್ರ ಎಂದು ಮುದ್ರಿತವಾಗಿದ್ದವೆಂದೂ, ಉಳಿದ 12 ರಟ್ಟಿನ ಪೆಟ್ಟಿಗೆಗಳ ಮೇಲೆ ಡಾಕ್ಟರ್ ಇಂಟಿಮೇಟ್ ರಿಜರ್ವ್ ನಂ.1 ಬ್ರಾಂದಿ ಎಂದು ಮುದ್ರಿತವಾಗಿತ್ತೆಂದೂ, ಇವುಗಳಲ್ಲಿಯೂ ಸಹ ಪ್ರತಿಯೊಂದು ಪೆಟ್ಟಿಗೆಯಲ್ಲಿ 180 ಮಿ.ಲೀ.ನ. 48 ಸೀಸೆಗಳಂತೆ ಒಟ್ಟು 576 ಸೀಸೆಗಳು ಇದ್ದವೆಂದೂ, ಇವುಗಳ ಮೇಲೆಯೂ ಸಹ ಗೋವಾ ರಾಜ್ಯದಲ್ಲಿ ತಯಾರಾಗಿದ್ದು ಕೇರಳ ರಾಜ್ಯದಲ್ಲಿ ಮಾರಾಟಕ್ಕೆ ಮಾತ್ರ ಎಂದು ಮುದ್ರಿತವಾಗಿದ್ದವು ಎಂದೂ, ನಂತರ 39 ಪ್ಲಾಸ್ಟಿಕ್ ಕ್ಯಾನುಗಳಲ್ಲಿನ ದ್ರವ ಪದಾರ್ಥವನ್ನು ಪರಿಶೀಲಿಸಲಾಗಿ ಪ್ರತಿಯೊಂದರಲ್ಲಿ ತಲಾ 35 ಲೀ. ನಂತೆ ಒಟ್ಟು 1365 ಲೀ. ಮದ್ಯಸಾರ ಇರುವುದು ಖಚಿತವಾಯಿತೆಂದೂ, ಈ ಮದ್ಯ ಹಾಗೂ ಮದ್ಯಸಾರವನ್ನು ಸಾಗಿಸಲು ಯಾವುದೇ ರೀತಿಯ ಅಧಿಕೃತ ದಾಖಲೆಗಳು ಇದ್ದದ್ದು ಕಂಡುಬಾರದಿದ್ದುದರಿಂದ ಇದು ಅಕ್ರಮ ಮದ್ಯಸಾಗಾಣಿಕೆಯ ಪ್ರಕರಣವೆಂದು ಖಾತ್ರಿಯಾಗಿ ಇವುಗಳನ್ನು ಪಂಚನಾಮೆಯ ಮೂಲಕ ಜಪ್ತು ಮಾಡಿ, ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14 ರಂತೆ ಅಪರಾಧವಾಗಿದ್ದು, ಕಲಂ 32, 33, 34 ಮತ್ತು 38ಎ ರಂತೆ ಶಿಕ್ಷಾರ್ಹವಾಗಿರುವುದಾಗಿ ಮಾಜಾಳಿ ತನಿಖಾ ಠಾಣೆಯ ಅಬಕಾರಿ ಉಪ ಅಧೀಕ್ಷಕರ ಗುನ್ಹೆ ಸಂಖ್ಯೆ:3/99-2000 ದಿನಾಂಕ:17.02.2000 ರಂತೆ ಗುನ್ಹೆಯನ್ನು ದಾಖಲಿಸಿ ಗುನ್ಹೆಗೆ ಸಂಬಂಧಿಸಿದ ಪ್ರ.ಮಾ. ವರದಿ ಸ್ವತ್ತಿನಪಟ್ಟಿ ಮತ್ತು ಫಿರ್ಯಾಧಿ ನಕಲನ್ನು ಪ್ರಾಧಿಕಾರಕ್ಕೆ ಸಲ್ಲಿಸುತ್ತಾ, ಜಪ್ತಿಯಾದ ವಾಹನ, ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಬೇಕೆಂದು ವಿನಂತಿಸಿರುತ್ತಾರೆ.

2. ಅನಂತರ ಈ ಪ್ರಕರಣದ ತನಿಖಾಧಿಕಾರಿಗಳು ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ಬಗೆಗಿನ ರಾಸಾಯನಿಕ ವಿಶ್ಲೇಷಣಾ ವರದಿಯ ದೃಢೀಕೃತ ಪ್ರತಿ ಹಾಗೂ ಪಂಚನಾಮೆಯ ದೃಢೀಕೃತ ಪ್ರತಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿದ್ದರ ಹಿನ್ನೆಲೆಯಲ್ಲಿ, ಪ್ರಕರಣ ದಾಖಲಿಸಿ 3 ತಿಂಗಳು ಕಳೆದರೂ ಸಹ ಜಪ್ತಿಯಾದಂತಹ ಮದ್ಯಸಾರದ ಮಾಲೀಕತ್ವವನ್ನು ಕೋರಿ ತನ್ನ ಹಕ್ಕನ್ನು ಸ್ಥಾಪಿಸಿ ಯಾರೂ ಅರ್ಜಿಯನ್ನು ಸಲ್ಲಿಸದಿದ್ದುದರಿಂದ ಪ್ರಾಧಿಕಾರದ ಆದೇಶ ಸಂಖ್ಯೆ: ಡಿಟಿಸಿಆರ್/199/99-2000 ದಿನಾಂಕ: 20.04.2000 ರಂತೆ ಪ್ರಕರಣದಲ್ಲಿ ಜಪ್ತಿಯಾದ ಮದ್ಯ ಮತ್ತು ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಇವು ಮಾನವನ ಸೇವನೆಗೆ ಯೋಗ್ಯವಿಲ್ಲದೇ ಇರುವುದರಿಂದ ಇವುಗಳನ್ನು ನಾಶಪಡಿಸಿ ಖಾಲಿ ಸೀಸೆಗಳು ಮತ್ತು ಕ್ಯಾನುಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ಆದೇಶಿಸಲಾಗಿರುತ್ತದೆ.

3. ಅನಂತರ ಈ ಪ್ರಕರಣದ ಆರೋಪಿ ಹಾಗೂ ವಾಹನದ ಝೆರಾಕ್ಸ್ ಪ್ರತಿಯ ಆಧಾರದ ಮೇಲಿನ ವಾಹನದ ಮಾಲೀಕರಾದ ಎಂ.ಪಿ. ಅಬ್ದುಲ್ಲಾಕುಟ್ಟಿ ತಂದೆ ಮಾಯಮಮ್ ಸಾ: ಮನಿಯಾಧಿಪುರಥ ಹೌಸ್ ಅಲನಕೋಡ ಕೇರಳ ರಾಜ್ಯ ಇವರಿಗೆ ನೋಂದಾಯಿತ ಅಂಚೆ ಮೂಲಕ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕಾಗಿ ಕಾರಣ ಕೇಳಿ ನೋಟೀಸನ್ನು ಕಲಂ 43ಬಿ(1)ಎ ರನ್ವಯ ಕಳುಹಿಸಲಾಗಿ, ಅದನ್ನು ಅವರು ದಿನಾಂಕ:01.07.2000 ರಂದು ಸ್ವೀಕರಿಸಿರುತ್ತಾರೆ. ಮತ್ತು ಸದ್ರಿ ಕಾರಣ ಕೇಳಿ ನೋಟಿಸಿಗೆ ದಿನಾಂಕ:24.08.2000 ರಂದು ಶ್ರೀ ಆರ್.ವಿ. ಭಟ್, ವಕೀಲರು ಕಾರವಾರ ರವರು ಉತ್ತರಿಸಿರುತ್ತಾರೆ.

4. ಅನಂತರ ದಿನಾಂಕ:07.09.2000 ರಂದು ಶ್ರೀ ಆರ್.ಎಸ್. ಪ್ರಭು, ವಕೀಲರು ಕಾರವಾರ ಹಾಗೂ ಶ್ರೀ ಆರ್.ವಿ. ಭಟ್ ವಕೀಲರು ಕಾರವಾರ ಇವರುಗಳು ಈ ಪ್ರಾಧಿಕಾರದಲ್ಲಿ ವಕಾಲತ್‌ನಾಮವನ್ನು ಸಲ್ಲಿಸಿರುತ್ತಾರೆ. ದಿನಾಂಕ:28.10.2000 ರಂದು ಶ್ರೀ ಆರ್.ವಿ. ಭಟ್, ವಕೀಲರು ಕಾರವಾರ ಇವರು ಈ ಪ್ರಾಧಿಕಾರದಲ್ಲಿ ಅರ್ಜಿಯನ್ನು ಸಲ್ಲಿಸಿ, ಜಪ್ತಿಯಾದ ವಾಹನವನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ವಿನಂತಿಸಿಕೊಂಡಿರುತ್ತಾರೆ. ಅದರಲ್ಲಿ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನವು ಅರ್ಜಿದಾರರದ್ದಾಗಿದ್ದು, ಸಿ.ಕೆ. ಉನ್ನಿಕೃಷ್ಣನ್ ಇವರು ಜಿ.ಪಿ.ಎ. ಧಾರಕರಾಗಿದ್ದು, ಸದ್ರಿ ವಾಹನದ ಆರ್.ಸಿ. ಮಾಲೀಕತ್ವವು ಎಂ.ಪಿ. ಅಬ್ದುಲ್ಲಾಕುಟ್ಟಿ ಇವರದ್ದಾಗಿದ್ದರೂ ಸಿ.ಕೆ. ಉನ್ನಿಕೃಷ್ಣನ್ ಇವರು ಪೂರ್ಣ ಹಕ್ಕುಳ್ಳವರಾಗಿದ್ದಾರೆಂದೂ, ವಾಹನವನ್ನು ಜಪ್ತು ಮಾಡಿದ ದಿನ ಇವರೇ ಅಟಾರ್ನಿಯನ್ನು ಹೊಂದಿದ್ದರೆಂದೂ ಆತನು ಚಾಲಕನಿಗೆ ವಾಹನವನ್ನು ನೀಡಿದಾಗ ವಾಹನವು ಜಪ್ತಿಯಾಗಿರುತ್ತದೆಂದೂ ತಿಳಿಸುತ್ತಾ, ಸದ್ರಿ ವಾಹನವನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಬೇಕೆಂದೂ ವಿನಂತಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಮೂಲ ಆರ್.ಸಿ. ಪುಸ್ತಕವನ್ನು ಸಲ್ಲಿಸುವಂತೆ ದಿನಾಂಕ:15.11.2000 ರಂದು ಎದುರುದಾರರ ಪಕ್ಷದವರಿಗೆ ಸೂಚಿಸಲಾಗಿ ಆದರೆ ಅದನ್ನು ಕೊನೆಯವರೆಗೂ ಹಾಜರುಪಡಿಸಿರಲಿಲ್ಲ ಮತ್ತು ಜಿ.ಪಿ.ಎ. ಯನ್ನು ಸಹ ಹಾಜರುಪಡಿಸಿರಲಿಲ್ಲ.

5. ದಿನಾಂಕ:15.11.2000 ನಂತರ ಸಾಕಷ್ಟು ಬಾರಿ ವಿಚಾರಣೆಗೆ ದಿನಾಂಕವನ್ನು ನಿಗದಿಗೊಳಿಸಲಾಗಿ ಎದುರುದಾರರ ಪಕ್ಷದವರಿಗೆ ನೋಂದಾಯಿತ ಅಂಚೆ ಮೂಲಕ ಮತ್ತು ಪ್ರಾಧಿಕಾರದ ಮುದ್ದಾಂ ಪುಸ್ತಕದ ಮೂಲಕ ನೋಟೀಸುಗಳನ್ನು ಕಳುಹಿಸಲಾಗಿ, ಎದುರುದಾರರ

ಪಕ್ಷದವರು ಒಮ್ಮೆಯೂ ಪ್ರಾಧಿಕಾರದಲ್ಲಿ ಹಾಜರಾಗಿರುವುದಿಲ್ಲ. ನಂತರ ದಿನಾಂಕ:24.12.2003 ರಂದು ಶ್ರೀ ಆರ್.ವಿ. ಭಟ್, ವಕೀಲರು ಕಾರವಾರ ಇವರು ಈ ಪ್ರಕರಣದಲ್ಲಿ ತನಗೆ ಮುಂದುವರೆಯಲು ಸೂಚನೆ ಇರುವುದಿಲ್ಲವೆಂದೂ ಮತ್ತು ಕಳೆದ ಒಂದೂವರೆವರ್ಷಗಳಿಂದ ಅರ್ಜಿದಾರರು ತನಗೆ ಭೇಟಿಯಾಗಿಲ್ಲವೆಂದೂ ಕಾರಣ ತಾನು ಈ ಪ್ರಕರಣದಲ್ಲಿ ನಿವೃತ್ತನಾಗುತ್ತಿದ್ದೇನೆ ಎಂದೂ ತಿಳಿಸಿರುತ್ತಾರೆ.

6. ರಾಸಾಯನಿಕ ವಿಶ್ಲೇಷಣಾ ವರದಿಯ ಆಧಾರದ ಮೇಲೆ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ಬಿ (1) ಸಿ ಪ್ರಕಾರ ವಿಚಾರಣೆಯನ್ನು ಪ್ರಾರಂಭಿಸಲಾಗಿ, ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿಡಬ್ಲ್ಯೂ 1 ರಿಂದ ಪಿಡಬ್ಲ್ಯೂ 2 ರವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ ನಿಶಾನೆ 1 ರಿಂದ 3 ರವರೆಗೆ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಈ ಪ್ರಕರಣದಲ್ಲಿ ದಿನಾಂಕ:05.03.2003 ರಂದು ಪಿ.ಡಬ್ಲ್ಯೂ 1 ನೇಯವರು ಪ್ರಾಧಿಕಾರದಲ್ಲಿ ಹಾಜರಾಗಿ ತನ್ನ ಸಾಕ್ಷಿಯನ್ನು ನುಡಿದಿದ್ದು, ಆ ದಿನ ಪಾಟೀ ಸವಾಲಿಗಾಗಿ ಎದುರುದಾರರ ಪಕ್ಷದವರು ಹಾಜರಿರುವುದಿಲ್ಲ. ಅನಂತರ ದಿನಾಂಕ:10.12.2003 ರಂದು ಪಿ.ಡಬ್ಲ್ಯೂ 2 ನೇಯವರು ತನ್ನ ಸಾಕ್ಷಿಯನ್ನು ನುಡಿದಿದ್ದು, ಎದುರುದಾರರ ಪಕ್ಷದವರು ಹಾಜರಿರದಿದ್ದುದರಿಂದ ಪಾಟೀ ಸವಾಲು ಮಾಡಲು ಸಾಧ್ಯವಾಗಿರುವುದಿಲ್ಲ. ಈ ಹಂತದಲ್ಲಿ ಲಭ್ಯವಿರುವ ದಾಖಲೆಗಳು ಮತ್ತು ಪ್ರಾಧಿಕಾರದಲ್ಲಿ ನುಡಿದಿರುವ ಸಾಕ್ಷಿಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವುದು ಸೂಕ್ತವೆಂದು ಕಂಡುಬಂದು, ಅದಕ್ಕೂ ಮುನ್ನ ಈ ಕೆಳಕಾಣಿಸಿದ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬಂತು.

7. ಅ) ದಿನಾಂಕ:17.02.2000 ರಂದು ರಾತ್ರಿ 2-45 ಗಂಟೆಯ ಸಮಯಕ್ಕೆ ಮಾಜಾಳಿ ತನಿಖಾ ಠಾಣೆಯ ಹತ್ತಿರ ಬಂದು ನಿಂತಿದಂತಹ ಟೆಂಪೊ ಸಂಖ್ಯೆ:ಕೆಡಿಇ/7729 ನೇದನ್ನು ತಪಾಸಿಸಿದಾಗ ಅದರಲ್ಲಿ ಅಕ್ರಮವಾಗಿ 78 ಪೆಟ್ಟಿಗೆ ಮದ್ಯ ಹಾಗೂ 39 ಕ್ಯಾನುಗಳಲ್ಲಿ ತಲಾ 35 ಲೀ. ನಂತೆ ಒಟ್ಟು 1365 ಲೀ ಮದ್ಯಸಾರವನ್ನು ಸಾಗಿಸಲಾಗುತ್ತಿತ್ತೆ? ಅಥವಾ ಇಲ್ಲವೇ?

ಬ) ಈ ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಎಜೆಂಟರ ಗಮನಕ್ಕೆ ಬಾರದೇ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಸದ್ರಿ ಅಕ್ರಮ ಮದ್ಯ ಮತ್ತು ಮದ್ಯಸಾರದ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ ಅಥವಾ ಇಲ್ಲವೇ?

ಕ) ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೇ ಅಥವಾ ಇಲ್ಲವೇ?

ಈ ಎಲ್ಲಾ ವಿವಾದಾಂಶಗಳಿಗೆ ನಾನು ಈ ಕೆಳಗಿನಂತೆ ಉತ್ತರಿಸಿದ್ದೇನೆ.

ಅಂಶ1: ಸಕಾರಾತ್ಮಕವಾಗಿ

ಅಂಶ2: ನಕಾರಾತ್ಮಕವಾಗಿ

ಅಂಶ3: ಸಕಾರಾತ್ಮಕವಾಗಿ

**ಕಾರಣಗಳು**

8. ಒಂದನೆಯ ಅಂಶವನ್ನು ರುಜುವಾತುಪಡಿಸಲು ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಈ ಪ್ರಕರಣದ ಪಂಚ ಸಾಕ್ಷಿ ನಂ. 3ನೇ ಯವರಾದ ಎಂ.ವಿ. ನಾಗೇಕರ ಅಬಕಾರಿ ರಕ್ಷಕ ಇವರು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿ.ಡಬ್ಲ್ಯೂ 1 ರಂತೆ ಮಾನ್ಯ ಎಡಿಪಿಯವರ ಮುಖ್ಯ ವಿಚಾರಣೆಗೆ ಉತ್ತರಿಸುತ್ತ, ದಿನಾಂಕ:17.02.2000 ರಂದು ರಾತ್ರಿ 2-45 ಗಂಟೆಯ ಸಮಯಕ್ಕೆ ತನ್ನ ಜೊತೆಗೆ ಜಿ.ಎಂ. ನಾಯ್ಕ ಮತ್ತು ಸಿರ್ಸಿಕರ ಇವರುಗಳು ಇದ್ದರೆಂದೂ ಹಾಗೂ ಅಬಕಾರಿ ನಿರೀಕ್ಷಕರಾದ ಎಸ್.ಎಸ್. ಖತೀಬ್‌ರವರು ಸಹ ಇದ್ದರೆಂದೂ, ಆಗ ಒಂದು ಟ್ರಕ್ ಬಂದಿದ್ದು ಅದರ ಸಂಖ್ಯೆ:ಕೆ.ಡಿ.ಇ. 7729 ಆಗಿತ್ತೆಂದೂ, ಸದರಿ ಗಾಡಿಯನ್ನು ಪರಿಶೀಲಿಸುವುದಕ್ಕಾಗಿ ಚಾಲಕನನ್ನು ಕೇಳಲಾಗಿ ಆತನು ಅದರಲ್ಲಿ ಮೀನು ತುಂಬಿದ್ದಾಗಿ ಹೇಳಿದನೆಂದೂ, ಸಂಶಯಗೊಂಡು ಟರ್ಪಾಲನ್ನು ತೆಗೆದು ನೋಡಲಾಗಿ ಅದರ ಕೆಳಗಡೆ 39 ಪ್ಲಾಸ್ಟಿಕ್ ಕ್ಯಾನುಗಳಿದ್ದವೆಂದೂ, ಅವುಗಳಿಗೆ ಉಗ್ರವಾಸನೆ ಬರುತ್ತಿತ್ತೆಂದೂ, ಅಷ್ಟರಲ್ಲಿ ಚಾಲಕನು ಓಡಿ ಹೋದನೆಂದೂ ಉಗ್ರವಾಸನೆ ಬರುವ ಕ್ಯಾನುಗಳನ್ನು ಪರಿಶೀಲಿಸಿ ನೋಡಲಾಗಿ ಅದರಲ್ಲಿ ಸ್ಪಿರೀಟ್ ಇದ್ದದ್ದು ಗೊತ್ತಾಯಿತೆಂದೂ, ಮತ್ತು ಅದರಲ್ಲಿ 78 ಬಾಕ್ಸ್ ಬ್ರಿಗೇಡಿಯರ್ ತ್ರಿ ಎಕ್ಸ್ ರಂ ಮತ್ತು ಇಂಪಿರಿಯಲ್ ಬ್ರಾಂದಿ ಬಾಟ್ಲಿಗಳಿದ್ದವೆಂದೂ ನುಡಿದಿರುತ್ತಾರೆ. ಆ ದಿನ ಎದುರುದಾರರ ಪಕ್ಷದವರು ಹಾಜರಿರದಿದ್ದುದರಿಂದ ಪಾಟೀ ಸವಾಲನ್ನು ಮಾಡಲಾಗಿಲ್ಲ.

9. ನಂತರ ಈ ಪ್ರಕರಣದ ಫಿರ್ಯಾದುದಾರರಾದ ಎಸ್.ಎಸ್. ಖತೀಬ್ ಅಬಕಾರಿ ನಿರೀಕ್ಷಕರು ಈ ಪ್ರಾಧಿಕಾರದಲ್ಲಿ ದಿನಾಂಕ: 10.12.2003 ರಂದು ಹಾಜರಾಗಿ ಪಿ.ಡಬ್ಲ್ಯೂ 2 ರಂತೆ ಮಾನ್ಯ ಎಡಿಪಿಯವರ ಮುಖ್ಯ ವಿಚಾರಣೆಯಲ್ಲಿ ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿಕೊಂಡು ಸಾಕ್ಷಿ ನುಡಿದಿರುತ್ತಾರೆ. ಆ ದಿನವೂ ಸಹ ಅರ್ಜಿದಾರರ ಪರ ವಕೀಲರು ಗೈರು ಹಾಜರು ಇದ್ದುದರಿಂದ ಪಾಟೀ ಸವಾಲನ್ನು ಮಾಡಲಾಗಿರುವುದಿಲ್ಲ.

**ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:**

10. ಅಭಿಯೋಜನೆ ಪಕ್ಷದವರು ತನ್ನ ಪರ ಇಬ್ಬರು ಸಾಕ್ಷಿದಾರರ ಸಾಕ್ಷ್ಯಗಳನ್ನು ನುಡಿಸಿದ್ದು, ಇಬ್ಬರೂ ಸಹ ಅಭಿಯೋಜನೆಗೆ ಸಹಕಾರಿಯಾಗಿ ಸಾಕ್ಷಿ ನುಡಿದಿರುವುದರಿಂದ ಈ ಪ್ರಕರಣದಲ್ಲಿ ಅಕ್ರಮವಾಗಿ ಮದ್ಯದ ಪೆಟ್ಟಿಗೆಗಳು ಮತ್ತು ಸ್ಪಿರೀಟ್‌ನ ಕ್ಯಾನುಗಳನ್ನು ಪರಾರಿಯಾದ ಆರೋಪಿಗಳು ಸಾಗಿಸಿರುವುದು ದೃಢಪಟ್ಟಿರುವುದರಿಂದ ಒಂದನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸಲಾಗಿದೆ.

11. ಎರಡನೆಯ ವಿವಾದಾಂಶವನ್ನು ಸಮರ್ಥಿಸಿಕೊಳ್ಳುವುದಕ್ಕಾಗಿ ಎದುರುದಾರರ ಪಕ್ಷದವರಿಗೆ ಸಾಕಷ್ಟು ನೋಟೀಸುಗಳನ್ನು ಅಂಚೆಯ ಮೂಲಕ ಮತ್ತು ಪ್ರಾಧಿಕಾರದ ಮುದ್ದಾಂ ಪುಸ್ತಕದ ಮೂಲಕ ಕಳುಹಿಸಲಾಗಿದ್ದರೂ ಸಹ ಯಾರೂ ಈ ಪ್ರಾಧಿಕಾರದಲ್ಲಿ ಹಾಜರಾಗಿ ತನ್ನ ಪರ ಸಾಕ್ಷ್ಯಗಳನ್ನು ನುಡಿದಿರುವುದಿಲ್ಲ. ಅಲ್ಲದೇ ಅರ್ಜಿದಾರರ ಪರ ವಕೀಲರೇ ತಿಳಿಸಿರುವಂತೆ ಅರ್ಜಿದಾರರು ಕಳೆದ ಒಂದೂವರೆ ವರ್ಷಗಳಿಂದ ಅವರನ್ನು ಸಂಪರ್ಕಿಸದೇ ಇರುವುದರಿಂದ ಅವರಿಗೆ ಈ ಪ್ರಕರಣದಲ್ಲಿ ತಾನು ಶಾಮೀಲಾಗಿದ್ದು ಮತ್ತು ತನ್ನ ತಿಳುವಳಿಕೆಗೆ ಬಂದುಕೊಂಡೇ ಅಕ್ರಮ ಮದ್ಯ ಮತ್ತು ಮದ್ಯಸಾರದ ಸಾಗಾಟವಾಗಿದ್ದು ವ್ಯಕ್ತವಾದುದರಿಂದ ಅವರು ಬೇಕೆಂದೇ ಈ ಪ್ರಾಧಿಕಾರದಲ್ಲಿಯೂ

ಮತ್ತು ಅವರ ಪರ ವಕೀಲರಲ್ಲಿಯೂ ಹಾಜರಾಗದೇ ಇರುವುದು ಕಂಡು ಬರುತ್ತದೆ. ಆದುದರಿಂದ ಎರಡನೆಯ ವಿವಾದಾಂಶವನ್ನು ತೃಪ್ತಿಕರವಾಗಿ ನಿರೂಪಿಸಲು ಎದುರುದಾರರ ಪಕ್ಷದವರು ವಿಫಲರಾಗಿರುವುದರಿಂದ ಈ ವಿವಾದಾಂಶವನ್ನು ನಕಾರಾತ್ಮಕವಾಗಿ ಉತ್ತರಿಸಿದ್ದೇನೆ.

12. ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನದಲ್ಲಿ ಅಕ್ರಮವಾಗಿ ಮದ್ಯ ಮತ್ತು ಮದ್ಯಸಾರವನ್ನು ಸಾಗಾಟ ಮಾಡಿರುವುದು ಸಾಬೀತಾಗಿರುವುದರಿಂದ ಮತ್ತು ಈ ಸಾಗಾಣಿಕೆಯು ವಾಹನದ/ಚಾಲಕರು, ಮಾಲೀಕರು ಮತ್ತು ಅವರ ಏಜೆಂಟರ ಗಮನಕ್ಕೆ ಬಂದೇ ಮತ್ತು ಅವರು ಶಾಮೀಲಾಗಿಯೇ ಆಗಿರುವುದು ಕಂಡು ಬರುವುದರಿಂದ ಮತ್ತು ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 78/2000 ದಿನಾಂಕ: 07.11.2003ರಲ್ಲಿ ನೀಡಿದ ತೀರ್ಪಿನಲ್ಲಿ ಈ ಪ್ರಾಧಿಕಾರದ ಇದೇ ರೀತಿಯ ಆದೇಶವನ್ನು ಎತ್ತಿ ಹಿಡಿದಿರುವುದರಿಂದ ಮೂರನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸುತ್ತ, ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ (1)ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 ಬಿ ಪ್ರಕಾರ ಅನುಸರಿಸಬೇಕಾದಂತಹ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಮಾಜಾಳಿ ತನಿಖಾ ಠಾಣೆಯ ಗುನ್ನೆ ಸಂಖ್ಯೆ:3/99-2000 ದಿನಾಂಕ:17.02.2000ರಲ್ಲಿ ಜಪ್ತಿಯಾದಂತಹ ಟೆಂಪೊ ಸಂಖ್ಯೆ: ಕೆಡಿಇ-7729 ನೇದನ್ನು ಕಲಂ 43 ಎ (2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

(ಈ ಆದೇಶವನ್ನು ಇಂದು ಅಂದರೆ 2004ನೇ ಇಸ್ವಿಯ ಜನವರಿ ತಿಂಗಳ 16ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಬೆರಳಚ್ಚು ಮಾಡಿಸಿ, ಬೆರಳಚ್ಚಿಸಿದ ಪ್ರತಿಯನ್ನು ತಿದ್ದಿದ ನಂತರ ಗಣಕೀಕೃತಗೊಳಿಸಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಎಸ್.ಎಸ್. ವಡಕಣ್ಣವರ**
ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ (ಪ್ರಭಾರ)

**ಅನುಬಂಧ-1**

**(ಅಭಿಯೋಜಕರ ಸಾಕ್ಷಿದಾರರ ಪಟ್ಟಿ)**

1. ಪ್ರಾ.ಸಾ. ನಂ.1 : ಎಂ.ವಿ. ನಾಗೇಕರ ಅಬಕಾರಿ ರಕ್ಷಕ
2. ಪ್ರಾ.ಸಾ. ನಂ.2 : ಎಸ್.ಎಸ್. ಖತೀಬ್ ಅಬಕಾರಿ ನಿರೀಕ್ಷಕ

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

-ಇಲ್ಲಾ-

**ಅನುಬಂಧ-3**

**(ಅಭಿಯೋಜಕರ ಪರ ಗುರ್ತಿಸಲಾದ ದಾಖಲೆಗಳು)**

1. ನಿಶಾನೆ ಇಎಕ್ಸ್ ಪಿ-1 : ಪಂಚನಾಮೆ
2. ನಿಶಾನೆ ಇಎಕ್ಸ್ ಪಿ-1ಎ : ಪಂಚಸಾಕ್ಷಿ 3ನೇಯವರ ಸಹಿ
3. ನಿಶಾನೆ ಇಎಕ್ಸ್ ಪಿ-1ಬಿ : ಫಿರ್ಯಾದುದಾರರ ಸಹಿ
4. ನಿಶಾನೆ ಇಎಕ್ಸ್ ಪಿ-2 : ಪ್ರ.ಮಾ. ವರದಿ
5. ನಿಶಾನೆ ಇಎಕ್ಸ್ಇ ಪಿ2-ಎ : ಪ್ರ.ಮಾ. ವರದಿಯ ಮೇಲಿನ ಸಹಿ
6. ನಿಶಾನೆ ಇಎಕ್ಸ್ಇ ಪಿ-3 : ರಾಸಾಯನಿಕ ವಿಶ್ಲೇಷಣಾ ವರದಿ
7. ನಿಶಾನೆ ಇಎಕ್ಸ್ಇ ಪಿ3-ಎ : ರಾಸಾಯನಿಕ ವಿಶ್ಲೇಷಣಾ ವರದಿಯ ಮೇಲಿನ ಸಹಿ

**ಅನುಬಂಧ-4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

-ಇಲ್ಲಾ-

**ಎಸ್.ಎಸ್. ವಡಕಣ್ಣವರ**
ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ (ಪ್ರಭಾರ)

ಪಿ.ಆರ್.132